ಶುಕ್ರವಾರ, ಡಿಸೆಂಬರ್ ೨೦, ೨೦೨೪

# ಉದಯವಾಣಿ

ಜನಮನದ ಜೀವನಾಡಿ

೧೬ ಪುಟಗಳು



೮೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ

**ಮಂಡ್ಯ**

# ಸಕ್ಕರೆ ನಾಡಿನ ಅಕ್ಷರ ಜಾತ್ರೆ

**ವಿಶೇಷ ಸಂಚಿಕೆ**





**೨೦, ೨೧, ೨೨ ಡಿಸೆಂಬರ್ ೨೦೨೪**






# ಕನ್ನಡವೇ ಅಧಿಕಾರಿಗಳ ಹೃದಯದ ಭಾಷೆ ಆಗಲಿ

**ಆಡಳಿತದಲ್ಲಿ ಕನ್ನಡ ಈಗ ಶೇ 45ರಷ್ಟು ಜಾರಿಯಲ್ಲಿದೆ. ಇದನ್ನು ಶೇ.100ಕ್ಕೇರಿಸಲು ಎಲ್ಲರೂ ಪಣತೊಡಬೇಕಿದೆ. ಇದಕ್ಕೆ ಸರ್ಕಾರದ ಜತೆ ಸಾರ್ವಜನಿಕರ ಸಹಯೋಗವೂ ಬೇಕು. ಕನ್ನಡ ನೆಲದ ಭಾಷೆಯಾಗಿ ಉಳಿದುಕೊಳ್ಳಬೇಕಾದರೆ ಮಕ್ಕಳು ಕನಿಷ್ಠ 5ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲೇ ಒದು ವಂತಾಗಬೇಕು.**



■ ಡಾ. ಪುರುಷೋತ್ತಮ ಬಿಳಿಮಲೆ,
ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ

- ಇಂಗ್ಲಿಷ್ ಶಿಕ್ಷಣ ಪಡೆದ ಅಧಿಕಾರಿಗಳಿಗೆ ಕನ್ನಡದ ಪ್ರೀತಿ ಬೆಳೆಸಬೇಕಿದೆ
- ಆಡಳಿತದಲ್ಲಿ ಕನ್ನಡ ಬಳಕೆ ಪ್ರಮಾಣವನ್ನು ಶೇ. 100ಕ್ಕೆ ಏರಿಸಬೇಕು
- ಬ್ಯಾಂಕ್, ರೈಲ್ವೆ ಸಹಿತ ಕೇಂದ್ರ ಸರ್ಕಾರಿ ಕಚೇರಿಗಳಲ್ಲಿ ಕನ್ನಡ ಬಳಕೆ ಇನ್ನೂ ಮರೀಚಿಕೆ
- ಅಭಿವೃದ್ಧಿ ಪ್ರಾಧಿಕಾರಕ್ಕೆ ಬೇಕಿದೆ ದಂಡನಾಧಿಕಾರ

ಕಳೆದ 69 ವರ್ಷಗಳ ಹಿಂದೆ ಕನ್ನಡ ಭಾಷಿಕರು 20 ಆಡಳಿತಗಳಲ್ಲಿ ಹಂಚಿಹೋಗಿದ್ದರು. ಆ ಹೊತ್ತಿಗೆ ಕನ್ನಡಿಗರ ಆಡಳಿತ ಭಾಷೆಯು ಇಂಗ್ಲಿಷ್, ಮರಾಠಿ, ತೆಲುಗು, ಉರ್ದು ಮತ್ತಿತರ ಭಾಷೆಗಳ ನಡುವೆ ಹಂಚಿಹೋಗಿತ್ತು. ವಿವಿಧ ಆಡಳಿತಗಳಿಗೆ ಒಳಪಟ್ಟ ಕನ್ನಡಿಗರ ಸ್ಥಿತಿ ದಯನೀಯವಾಗಿತ್ತು. ಕನ್ನಡವು ಸಾರ್ವಜನಿಕ ಕ್ಷೇತ್ರದಿಂದ ಬಹುತೇಕ ಕಾಣೆಯಾಗಿತ್ತು. ಇಂಥ ಪರಿಸ್ಥಿತಿಯಲ್ಲಿ ಕರ್ನಾಟಕ ಏಕೀಕರಣ ಚಳವಳಿ ಹುಟ್ಟಿಕೊಂಡು, ಚದುರಿಹೋಗಿದ್ದ ಕನ್ನಡಿಗರನ್ನು ಒಟ್ಟುಗೂಡಿಸುವಲ್ಲಿ ಯಶಸ್ವಿಯಾಯಿತು. 1956ರ ನವೆಂಬರ್ 1ರಂದು ಮೈಸೂರು ರಾಜ್ಯ ಉದಯವಾಯಿತು. ಈ ಹೊಸ ರಾಜ್ಯಕ್ಕೆ 1973ರ ನವೆಂಬರ್ 1ರಂದು 'ಕರ್ನಾಟಕ' ಎಂದು ಮರು ನಾಮಕರಣವಾಯಿತು. ಕರ್ನಾಟಕಕ್ಕೆ ಹೊಸ ಹೆಸರು ಬಂದು ಇದೀಗ 50 ವರ್ಷಗಳು ಕಳೆದಿವೆ. ಈ 50 ವರ್ಷಗಳ ಅವಧಿಯಲ್ಲಿ ಕನ್ನಡವು ಆಡಳಿತ ಭಾಷೆಯಾಗಿ ಹೇಗೆ ಕಾರ್ಯನಿರ್ವಹಿಸಿದೆ ಎಂಬುದನ್ನು ಪ್ರಸ್ತುತ ಲೇಖನದಲ್ಲಿ ನೆನಪಿಸಿಕೊಳ್ಳಲಾಗಿದೆ.

## ಭಾಷೆಯ ಅಭಿವೃದ್ಧಿಗೆ ಹಲವು ಯೋಜನೆ

ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಅಂದಿನ ಮೈಸೂರು ರಾಜ್ಯವು 1963ರಲ್ಲಿ ಕನ್ನಡ ಭಾಷೆಯನ್ನು ರಾಜ್ಯದ ಅಧಿಕೃತ ಭಾಷೆಯೆಂದು ಘೋಷಿಸಿತು. ಆನಂತರ ಕನ್ನಡ ಭಾಷೆಯನ್ನು ಆಡಳಿತ ಭಾಷೆಯನ್ನಾಗಿ ಬೆಳೆಸಲು ಕರ್ನಾಟಕ ರಾಜಭಾಷಾ ಅಧಿನಿಯಮ 1963, ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ ಅಧಿನಿಯಮ 1981 ಮತ್ತು ಕನ್ನಡ ಭಾಷಾ ಕಲಿಕೆ ಅಧಿನಿಯಮ 2015ಗಳನ್ನು ಜಾರಿಗೆ ತಂದಿತು. 1979ರ ವರ್ಷವನ್ನು 'ಆಡಳಿತ ಭಾಷಾ ವರ್ಷ'ವನ್ನಾಗಿ ಆಚರಿಸಲಾಯಿತು. 1983ರಲ್ಲಿ ಸರೋಜಿನಿ ಮಹಿಷಿ ಸಮಿತಿ ರಚಿಸಲಾಯಿತು. ಆಡಳಿತದಲ್ಲಿ ಕನ್ನಡದ ಅನುಷ್ಠಾನವನ್ನು ಪರಿಶೀಲಿಸಲು 1984ರಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರವನ್ನೂ ಸ್ಥಾಪಿಸಿತು. 1992ರಲ್ಲಿ ಪ್ರಾಧಿಕಾರವು ಆಡಳಿತದ ಎಲ್ಲ ಹಂತಗಳಲ್ಲೂ ಕನ್ನಡವನ್ನು ಜಾರಿಗೆ ತರಲು 20 ಅಂಶಗಳ ಕಾರ್ಯಕ್ರಮ ರೂಪಿಸಿತು. ಸರಕಾರವು 1995ರಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ ಸ್ವಾಯತ್ತ ಮತ್ತು ಶಾಸನ ಬದ್ಧ ಸ್ಥಾನಮಾನವನ್ನೂ ನೀಡಿತು. ಹೀಗೆ ಹಂತ ಹಂತವಾಗಿ ಕನ್ನಡವು ಆಡಳಿತ ಭಾಷೆಯಾಗಿ ಬೆಳೆಯುತ್ತಾ ಬಂದಿದೆ. ವಸಾಹತು ಆಡಳಿತ ವಿಧಾನವನ್ನು ಹಾಗೆಯೇ ಮುಂದುವರಿಸಿಕೊಂಡು ಬಂದ ನಮಗೆ ಮೊದಲ ಹಂತದಲ್ಲಿ ಬ್ರಿಟಿಷರು ಬಳಸುತ್ತಿದ್ದ ಇಂಗ್ಲಿಷ್ ಪದಗಳಿಗೆ ಕನ್ನಡ ಪದಗಳನ್ನು ಕಂಡುಕೊಳ್ಳಬೇಕಾಯಿತು. ಈ ಹಂತದಲ್ಲಿ ಇಂಗ್ಲಿಷ್ ಪದಗಳಿಗೆ ಕನ್ನಡ ಪದಗಳಿಗಿಂತ ಹೆಚ್ಚಾಗಿ ಸಂಸ್ಕೃತ ಪದಗಳನ್ನು ಆಮದು ಮಾಡಿಕೊಳ್ಳಲಾಯಿತು. ಆಡಳಿತ ಪದಕೋಶಗಳೂ ತಯಾರಾದುವು. ಆದರೆ ಜನ ಬಳಕೆಯಲ್ಲಿಯೇ ಇಲ್ಲದ ಈ ಸಂಸ್ಕೃತ ಪದಗಳು ಆಡಳಿತದೊಳಗೆ ಅಷ್ಟೇನೂ ಜನಪ್ರಿಯವಾಗಲಿಲ್ಲ. ಈ ಪ್ರಕ್ರಿಯೆ ಶಿಕ್ಷಣ ಕ್ಷೇತ್ರದಲ್ಲಿಯೂ ಕಾಣಿಸಿತು. ಜನರು ಇಂಥ ಅರ್ಥವಾಗದ ಕ್ಲಿಷ್ಟ ಪದಗಳಿಗಿಂತ ಇಂಗ್ಲಿಷ್ ಪದಗಳೇ ವಾಸಿ ಎನ್ನತೊಡಗಿದರು. ಈ ಸಮಸ್ಯೆಯನ್ನು ನಮಗಿನ್ನೂ ಪೂರ್ತಿಯಾಗಿ ಪರಿಹರಿಸಿಕೊಳ್ಳಲಾಗಿಲ್ಲ.

### ಆಗಬೇಕಾದ್ದೇನು?

1. ಮಕ್ಕಳು ಕನಿಷ್ಠ ಐದನೇ ತರಗತಿ ತನಕ ಕನ್ನಡ ಮಾಧ್ಯಮದಲ್ಲಿಯೇ ಓದಬೇಕು.
2. ಈಗ ಶೇ.45ರಷ್ಟಿರುವ ಆಡಳಿತದಲ್ಲಿ ಕನ್ನಡ ಬಳಕೆಯನ್ನು ಶೇ100ಕ್ಕೇರಿಸಬೇಕಾಗಿದೆ.
3. ಕಂಪನಿಗಳ ಆಡಳಿತದೊಳಕ್ಕೆ ಕನ್ನಡ ತರಲು ಬೇಕಾದ ಕಾನೂನಿನ ಬಲ ಬೇಕಾಗಿದೆ
4. ಕನ್ನಡ ಬಳಸದ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಅಧಿಕಾರ ಪ್ರಾಧಿಕಾರಕ್ಕೆ ಬೇಕಿದೆ
5. ಅನ್ಯಾಯವಾದಾಗ ಪ್ರತಿಭಟಿಸುವ ಮನೋ ಭಾವವನ್ನು ಎಲ್ಲ ಕನ್ನಡಿಗರೂ ಬೆಳೆಸಿಕೊಳ್ಳಬೇಕು.

## ಭಾಷಾ ಬೆಳವಣಿಗೆಗೆ ಹಿಂದಿ, ಇಂಗ್ಲಿಷ್‌ನಿಂದ ತಡೆ

ಇಷ್ಟಿದ್ದರೂ ಪರಿಸ್ಥಿತಿ ಮೊದಲಿಗಿಂತ ವಾಸಿ ಅನ್ನಬ ಹುದು. ಏನಿಲ್ಲವೆಂದರೂ ಸುಮಾರು ಶೇಕಡಾ 45ರಷ್ಟು ಕಡೆ ಆಡಳಿತದಲ್ಲಿ ಕನ್ನಡ ಬಳಕೆಯಾ ಗುತ್ತಿದೆ. ಇದನ್ನು ಶೇಕಡಾ 100ಕ್ಕೆ ಏರಿಸಬೇಕಾ ಗಿದೆ. ಇದು ಸುಲಭದ ಕೆಲಸವೇನೂ ಅಲ್ಲ. 1990ರ ಆನಂತರ ಕಾಣಿಸಿಕೊಂಡ ಜಾಗತೀಕರ ಣವು ಮತ್ತೆ ಇಂಗ್ಲಿಷನ್ನೇ ಅನ್ನದ ಭಾಷೆಯನ್ನಾಗಿ ಮಾಡಿದೆ. ಬಹುರಾಷ್ಟ್ರೀಯ ಕಂಪನಿಗಳ ಆಡಳಿತದೊಳಕ್ಕೆ ಕನ್ನಡ ತರಲು ಬೇಕಾದ ಕಾನೂನಿನ ಬಲ ನಮಗಿಲ್ಲ. ಇಂಗ್ಲಿಷಿನ ಜೊತೆಗೆ ಹಿಂದಿಯೂ ಕನ್ನಡದ ಬೆಳವಣಿಗೆಗೆ ತಡೆಯಾಗಿದೆ. ಬ್ಯಾಂಕ್, ರೈಲ್ವೆ, ಅಂಚೆ ಕಚೇರಿ ಮೊದ ಲಾದ ಕೇಂದ್ರ ಸರಕಾರದ ಕಚೇರಿಗಳಲ್ಲಿ ಕನ್ನಡವನ್ನು ಅಳವಡಿಸಲು ನಮಗೆ ಸಾಧ್ಯವಾಗುತ್ತಿಲ್ಲ. ಕರ್ನಾಟಕದ ಆಡಳಿತದ ಒಳಗೆ ಬರುತ್ತಿ ರುವವರು ಇಂಗ್ಲಿಷ್ ಓದಿದವರೇ ಆಗಿರುವುದರಿಂದ ಅವರೇನೂ ಕನ್ನಡವನ್ನು ಹೃದಯದ ಭಾಷೆಯಾಗಿರಿಸಿ ಕೊಂಡು ಕೆಲಸ ಮಾಡುತ್ತಿಲ್ಲ. ಕೆಪಿಎಸ್‌ಸಿ ಪರೀಕ್ಷೆ ಬರೆದು ಆಡಳಿತಕ್ಕೆ ಬರುವವರ ಮಕ್ಕಳು ಇಂಗ್ಲಿಷ್ ಭಾಷೆಯಲ್ಲಿಯೇ ಓದುತ್ತಿದ್ದಾರೆ. ಈ ಸಂಕೀರ್ಣ ಪರಿಸ್ಥಿತಿಯನ್ನು ಬಗೆಹರಿಸಲು ನಾವೆಲ್ಲ ಬಹಳ ಕೆಲಸ ಮಾಡಬೇಕಾಗಿದೆ.

## ಸಲಹೆ ಕೊಡಬಹುದು, ಅಷ್ಟೇ...

ಇವತ್ತು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮುಂದೆ ಅನೇಕ ಸವಾಲುಗಳಿವೆ. ಪ್ರಾಧಿಕಾರದ ಅಧಿನಿಯಮ -19ರ ಪ್ರಕಾರ ಆಡಳಿತದಲ್ಲಿ ಕನ್ನಡ ಬಳಸದ ಅಧಿಕಾರಿಗಳ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಸರಕಾರಕ್ಕೆ ಸಲಹೆ ಮಾಡುವ ಅಧಿಕಾರವಷ್ಟೇ ಪ್ರಾಧಿಕಾರಕ್ಕಿದೆ. ಕಾನೂನು ಕ್ರಮ ಕೈಗೊಳ್ಳುವ ಅಧಿ ಕಾರವಿಲ್ಲ. ಆಡಳಿತದಲ್ಲಿ ಕನ್ನಡ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸರಕಾರವನ್ನು ಹೆಚ್ಚು ದೂರಿಯೂ ಪ್ರಯೋಜನವಿಲ್ಲ. ಸರಕಾರವು ಕನ್ನಡ ಅನುಷ್ಠಾನಕ್ಕಾಗಿ ರಾಜ್ಯ ಮಟ್ಟದ, ಜಿಲ್ಲಾ ಮಟ್ಟದ ಮತ್ತು ತಾಲೂಕು ಮಟ್ಟದ ಸಮಿತಿಗಳನ್ನು ಮಾಡಿದೆ. ಆದರೆ, ಸಮಿತಿಯವರು ಕೆಲಸ ಮಾಡಬೇಕಲ್ಲ? ಕನ್ನಡ ಜನರಿಗೇ ಬೇಡವಾದರೆ, ಪ್ರಾಧಿಕಾರ ಎಷ್ಟು ಕೆಲಸ ಮಾಡಬಹುದು?

## ಸ್ಪಂದಿಸುವ/ ಸ್ಪಂದಿಸದ ಅಧಿಕಾರಿ ವರ್ಗ

ಆದರೆ, ಕೆಲವೆಡೆ ಪರಿಸ್ಥಿತಿ ಸಾಕಷ್ಟು ಸುಧಾರಿಸಿದೆ. ರಾಜ್ಯ ಸರ್ಕಾರದ ಕಚೇರಿಗಳಲ್ಲಿ ಕನ್ನಡದ ಆಡಳಿತ ಹೆಚ್ಚೂ ಕಡಿಮೆ ಸದೃಢ ಸ್ಥಿತಿಯಲ್ಲಿದೆ. ಭಾರತೀಯ ಆಡಳಿತ ಸೇವೆಗೆ ಸೇರಿದ ಬಹುಪಾಲು ಅಧಿಕಾರಿಗಳಲ್ಲಿಯೂ ಕನ್ನಡದ ಕುರಿತಂತೆ ಸಕಾರಾತ್ಮಕ ಮನೋಭಾವ ಮೂಡಿದೆ. ಆದರೆ, ಎಲ್ಲ ಅಧಿಕಾರಿಗಳೂ ಹಾಗೇ ಇದ್ದಾರೆಂದು ಹೇಳಲು ಬರುವುದಿಲ್ಲ. ಟಿಪ್ಪಣಿಗಳನ್ನು ಕನ್ನಡದಲ್ಲಿ ದಾಖಲಿಸಲು ಅಶಕ್ತರಾಗಿರುವ, ಅನ್ಯಮನಸ್ಕರಾ ಗಿರುವ ಅಖಿಲ ಭಾರತ ಸೇವೆಗೆ ಸೇರಿದ ಕೆಲವು ಅಧಿಕಾರಿಗಳನ್ನೂ ನಾವು ಕಾಣಬಹುದು. ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅಂಥವರ ಕುರಿತು ಯಾವುದೇ ಸಹಾನುಭೂತಿಯನ್ನು ತೋರುವು ದಿಲ್ಲವೆನ್ನುವುದನ್ನು ಈಗಾಗಲೇ ಸಾಬೀತುಪಡಿಸಿದೆ. ಕಳೆದ ಬಾರಿ ಸಿದ್ದರಾಮಯ್ಯನವರೇ ಮುಖ್ಯಮಂತ್ರಿಯಾಗಿದ್ದಾಗ ಈ ರೀತಿಯ ಕನ್ನಡ ವಿರೋಧಿ ಧೋರಣೆ ಹೊಂದಿದ ಅಧಿಕಾರಿಯೊಬ್ಬರ ವಿರುದ್ಧ ಪ್ರಾಧಿಕಾರ ಕ್ರಮಕ್ಕೆ ಆಗ್ರಹಿಸಿದ ಸಂದರ್ಭದಲ್ಲಿ ಅವರನ್ನು ಕೇಂದ್ರ ಸೇವೆಗೆ ಹಿಂತಿರುಗಿಸಿದ್ದರು.

## ಅನ್ಯಾಯವಾದಾಗ ಪ್ರತಿಭಟಿಸಲೇಬೇಕು

ಇದು ರಾಜ್ಯ ಸರ್ಕಾರದ ಕಚೇರಿಗಳ, ಸಂಸ್ಥೆಗಳ ವಿಷಯವಾದರೆ ಕೇಂದ್ರ ಸರ್ಕಾರದ ಕಚೇರಿಗಳಲ್ಲಿ, ಕೇಂದ್ರೋದ್ಯಮಗಳಲ್ಲಿ, ಬ್ಯಾಂಕ್‌ಗಳಲ್ಲಿನ ಸ್ಥಿತಿಗತಿ ಗಮನಿಸಿದರೆ ವಿಷಾದವೇ ಫಲಿತಾಂಶವಾಗುತ್ತದೆ. ಇದಕ್ಕೆ ತ್ರಿಭಾಷಾ ನೀತಿ ಬಹಳ ದೊಡ್ಡ ಅಡತಡೆಯಾಗಿದೆ. ಇತ್ತೀಚೆಗೆ ದಕ್ಷಿಣ ಭಾರತಕ್ಕೆ ಸೇರಿದ ಕೇಂದ್ರ ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ಅವರು ಬ್ಯಾಂಕ್‌ಗಳಲ್ಲಿ ಕೆಲಸ ಮಾಡುವ ಸ್ಥಳೀಯ ಭಾಷೆಯನ್ನು ಬಲ್ಲ ಸಿಬ್ಬಂದಿ ಮಾತ್ರ ಸಾರ್ವಜನಿಕ ಸಂಪರ್ಕ ಕೆಲಸಗಳಲ್ಲಿ ತೊಡಗಿಸಿಕೊಳ್ಳಬೇಕೆಂದು ಸೂಚನೆ ನೀಡಿದ್ದರು. ಈ ವಿಷಯದಲ್ಲಿ ಎಲ್ಲ ಜಿಲ್ಲಾಧಿಕಾರಿಗಳನ್ನು ಸಂಪರ್ಕಿಸಿ, ಸ್ಥಳೀಯ ಬ್ಯಾಂಕರ್ ಸಮಿತಿಗಳಿಗೆ ತುರ್ತು ಸೂಚನೆ ನೀಡಲು ಆಗ್ರಹಿಸಿದ್ದೇನೆ. ಆ ಕೆಲಸವೂ ಇದೀಗ ನಡೆಯುತ್ತಿದೆ. ಕನ್ನಡ ಆಡಳಿತ ಭಾಷೆಯಾಗಿ, ಈ ನೆಲದ ಸಾರ್ವಭೌಮ ಭಾಷೆಯಾಗಿ ವಿಜೃಂಭಿಸಬೇಕಾದಲ್ಲಿ, ಮೂಲಭೂತ ಬದಲಾವಣೆಗಳಿಗೆ ನಾವು ಆದ್ಯತೆ ನೀಡಬೇಕು. ನಮ್ಮ ಮಕ್ಕಳು ಕನಿಷ್ಠ ಐದು ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಓದಬೇಕು. ಕನ್ನಡ ಸಂಸ್ಕೃತಿಯ ಕುರಿತು ಹೆಮ್ಮೆಪಡಬೇಕು. ಸಾರ್ವಜನಿಕರು, ಕೇಂದ್ರ ಸರ್ಕಾರದ, ಕೇಂದ್ರೋದ್ಯಮಗಳ ಸಂಘ ಸಂಸ್ಥೆಗಳಲ್ಲಿ ಕೆಲಸ ಮಾಡುವ ಕನ್ನಡಿಗರು ನಮ್ಮ ಭಾಷೆಗೆ ಅನ್ಯಾಯವಾಗುತ್ತಿದೆಯೆನ್ನುವ ಸಂದರ್ಭ ಗಮನಿಸಿದಾಗ ಪ್ರತಿಭಟಿಸಬೇಕು. ನ್ಯಾಯಾಲಯ, ಶಿಕ್ಷಣ, ಮತ್ತು ಮಾಧ್ಯಮ ಕ್ಷೇತ್ರಗಳು ಕನ್ನಡದ ಪರವಾಗಿ ನಿಲ್ಲಬೇಕು. ಹೀಗಾದರೆ ಕನ್ನಡ ಮುಂದಿನ ದಿನಗಳಲ್ಲಿ ಪತನಮುಖಿಯಾಗದೇ ಉಳಿಯಲು ಹೇಗೆ ಸಾಧ್ಯವಿದೆ ಎಂದು ನಾಡಿನ ಜನ ಗಂಭೀರವಾಗಿ ಆಲೋಚಿಸಬೇಕಾದ ಸಂದರ್ಭ ಇದು. ◆

■ ಮುಖಪುಟ ವಿನ್ಯಾಸ: ಜನಾರ್ಧನ್ ಬಿ.ಜಿ.

# ಫ್ಲ್ಯಾಶ್ ಬೆಳಕು, ಬೆಂಕಿಯ ಕಾವಿನಲ್ಲಿಯೇ ಬದುಕು ಕಟ್ಟಿದ ಛಲಗಾರ ಅರವಿಂದ್

## ಫೋಟೋಗ್ರಾಫರ್‌ನಿಂದ ಬೇಕರಿ ಉದ್ಯಮಕ್ಕೆ ಜಿಗಿದು ಯಶಸ್ವಿ
## ಬಿಜೆಪಿಯ ನಿಷ್ಠಾವಂತ ಕಾರ್ಯಕರ್ತ
### ಮಂಡ್ಯ ಜಿಲ್ಲಾ ಬೇಕರಿ ಮಾಲೀಕರ ಸಂಘದ ಅಧ್ಯಕ್ಷರು ಸಾಗಿ ಬಂದ ದಾರಿ

ನಿರಂತರ ಪರಿಶ್ರಮ, ಬದುಕುವ ಛಲ, ಸಾಧನೆಯ ಗುರಿ ಇದ್ದರೆ ಏನು ಬೇಕಾದರೂ ಸಾಧಿಸಬಹುದು. ಮಾಡುವ ಕೆಲಸದ ಮೇಲೆ ಪ್ರೀತಿ, ಶ್ರದ್ಧೆ, ಬದ್ಧತೆ ಇದ್ದರೆ ಜೀವನದಲ್ಲಿ ಎತ್ತರಕ್ಕೆ ಬೆಳೆಯಬಹುದು ಎಂಬುದಕ್ಕೆ ಬೇಕರಿ ಉದ್ಯಮಿ ಎಚ್‌.ಆರ್‌. ಅರವಿಂದ್ ಮಾದರಿಯಾಗಿದ್ದಾರೆ.

ಮಂಡ್ಯದ ಬನ್ನೂರು ರಸ್ತೆಯ ಚಾಮುಂಡೇಶ್ವರಿ ನಗರದ ಬೇಕ್ ಪಾಯಿಂಟ್ ಎಂದರೆ ಇಡೀ ನಗರವಲ್ಲದೆ ಜಿಲ್ಲೆಯಲ್ಲಿಯೇ ಚಿರಪರಿಚಿತರಾಗಿದ್ದಾರೆ. ಪ್ರಸ್ತುತ ಮಂಡ್ಯ ಜಿಲ್ಲಾ ಬೇಕರಿ ಮಾಲೀಕರ ಸಂಘದ ಅಧ್ಯಕ್ಷರೂ ಆಗಿರುವ ಬಿಜೆಪಿಯ ನಿಷ್ಠಾವಂತ ಕಟ್ಟಾಳು ಆಗಿರುವ ಎಚ್‌.ಆರ್‌.ಅರವಿಂದ್ ಅವರು ಬದುಕಿನ ಪಯಣವೇ ಒಂದು ರೋಚಕವಾಗಿದೆ.

ಜಿಲ್ಲೆಯ ನಿತ್ಯ ಸಚಿವ ಎಂದೇ ಖ್ಯಾತಿಯಾಗಿರುವ ಕೆ.ವಿ.ಶಂಕರಗೌಡ ಅವರ ಪ್ರತಿಷ್ಠಿತ ಕುಟುಂಬಕ್ಕೆ ಸೇರಿದ್ದರೂ ಯಾವುದೇ ಹಮ್ಮು-ಬಿಮ್ಮು ಇಲ್ಲದೆ, ಪ್ರತಿಯೊಬ್ಬರನ್ನೂ ಪ್ರೀತಿಯಿಂದ ಮಾತನಾಡಿಸುವ ವ್ಯಕ್ತಿತ್ವವುಳ್ಳವರು. ನಿತ್ಯಸಚಿವ ಕೆ.ವಿ.ಶಂಕರಗೌಡ ಅವರ ಕಿರಿಯ ಸೋದರ ಕೆ.ವಿ.ವೀರಪ್ಪನವರ ಪುತ್ರಿ ಸರ್ವಮಂಗಳ ಹಾಗೂ ಡಾ.ರಾಮೇಗೌಡ ದಂಪತಿಯ ಪುತ್ರರಾಗಿ ಜನಿಸಿದ ಅವರು, ತಂದೆ ವೈದ್ಯರಾಗಿದ್ದರೂ ಅರವಿಂದ್ ಅವರ ಜೀವನ ಅಷ್ಟು ಸುಲಭವಾಗಿರಲಿಲ್ಲ. ಪ್ರತಿಷ್ಠಿತ ಕುಟುಂಬದವರಾದರೂ ಬದುಕು ಕಟ್ಟಿಕೊಳ್ಳಲು ಸಾಕಷ್ಟು ಶ್ರಮಪಡಬೇಕಾಯಿತು. 4ನೇ ವಯಸ್ಸಿನ ಬಾಲ್ಯದಲ್ಲಿರುವಾಗಲೇ ತಂದೆ ಕಳೆದುಕೊಂಡು ಸಂಕಷ್ಟಕ್ಕೆ ಸಿಲುಕುವಂತಾಯಿತು. ಇದರಿಂದ ತಾಯಿ ಸರ್ವಮಂಗಳ ಅವರ ಮೇಲೆ ಸಾಕಷ್ಟು ಜವಾಬ್ದಾರಿ ಬಿದ್ದಿತ್ತು.

### ಮಾತೃ ಹೃದಯಿ ಮನೋಭಾವ

ಅರವಿಂದ್ ಅವರು ತಾಯಿ ಸರ್ವಮಂಗಳ, ತಾತ ಕೆ.ವಿ.ವೀರಪ್ಪ ಹಾಗೂ ಸೋದರ ಮಾವ ಕೆ.ವಿ.ಮಹೇಶ್ ಅವರ ಆಶ್ರಯದಲ್ಲಿ ಬೆಳೆದರು. ಬೆಳೆಯುತ್ತಾ ತಾಯಿಯಂತೆ ಮಾತೃ ಹೃದಯಿ ಮನೋಭಾವವೂ ಜೊತೆಯಲ್ಲಿಯೇ ಬಳುವಳಿಯಾಗಿ ಬಂದಿತು. ಇದರಿಂದ ಉತ್ತಮ ಶಿಕ್ಷಣ ಪಡೆಯಲು ಮುಂದಾಗಿದ್ದರು. ಆದರೆ ಬಿಇ ವ್ಯಾಸಂಗ ಮಾಡುತ್ತಿರುವಾಗಲೇ ಪ್ರೀತಿಯ ಬಲೆಗೆ ಬಿದ್ದು, ಮನೆಯವರ ವಿರೋಧದ ನಡುವೆಯೂ ಅಂತರ್ಜಾತಿ ವಿವಾಹವಾದರು. ಇದರಿಂದ ಕೌಟುಂಬಿಕವಾಗಿ ದೂರ ಉಳಿಯುವ ಪರಿಸ್ಥಿತಿ ನಿರ್ಮಾಣವಾಯಿತು.

ಸ್ವಂತ ಸ್ಟುಡಿಯೋ ಆರಂಭ: ಮದುವೆಯಾದ ಬಳಿಕ ಜೀವನ ನಿರ್ವಹಣೆಯ ಜವಾಬ್ದಾರಿ ಹೆಗಲ ಮೇಲೆ ಬಿದ್ದಿತ್ತು. ಆಗ ಬಿಇ ವ್ಯಾಸಂಗವನ್ನು ಅರ್ಧಕ್ಕೆ ಮೊಟಕುಗೊಳಿಸಿ ಏನಾದರೂ ಕೆಲಸ ಮಾಡಬೇಕು. ಸ್ವಂತ ಉದ್ಯಮ ಮಾಡಬೇಕು ಎಂಬ ಹಠ, ಛಲ ಬೆಳೆಸಿಕೊಂಡ ಎಚ್‌.ಆರ್‌. ಅರವಿಂದ್, ಕಾಲೇಜು ದಿನಗಳಲ್ಲಿ ಹೆಚ್ಚಾಗಿ ಇಷ್ಟಪಡುತ್ತಿದ್ದ ಫೋಟೋಗ್ರಫಿಯನ್ನೇ ಉದ್ಯಮವಾಗಿ ಪರಿವರ್ತಿಸಿಕೊಂಡರು. ಓದಿಗೂ ಮಾಡುವ ಉದ್ಯೋಗಕ್ಕೂ ಸಂಬಂಧವಿಲ್ಲದಿದ್ದರೂ ಫೋಟೋಗ್ರಫಿಯಲ್ಲಿಯೇ ಮುಂದುವರೆಯುವ ಹಿನ್ನೆಲೆಯಲ್ಲಿ ಸಾಲ ಮಾಡಿ ಕ್ಯಾಮೆರಾ ಖರೀದಿಸಿ ಜೀವನದಲ್ಲಿ ಆವರಿಸಿದ ಕತ್ತಲೆ ಕಳೆಯುವ ಹಿನ್ನೆಲೆಯಲ್ಲಿ ಸ್ವಂತ ಸ್ಟುಡಿಯೋ ಆರಂಭಿಸಿದರು.

ಮೊದಲು ತಾವೇ ಏಕಾಂಗಿಯಾಗಿ ನಡೆಸಿದರೂ ನಂತರ ನಾಲ್ಕೈದು ಮಂದಿ ಯುವಕರಿಗೆ ಉದ್ಯೋಗ ನೀಡಿದರು. ಇದರ ಜೊತೆಗೆ 28 ಯುವಕರಿಗೆ ಫೋಟೋಗ್ರಫಿ ಮತ್ತು ವಿಡಿಯೋಗ್ರಫಿ ಕಲಿಸುವ ಮೂಲಕ ಗುರುವಿನ ಸ್ಥಾನವನ್ನು ಪಡೆದರು. ಇದರಿಂದ ಇಂದಿಗೂ ಅವರಿಂದ ಫೋಟೋಗ್ರಫಿ ಕಲಿತವರು ಪತ್ರಿಕೋದ್ಯಮ ಸೇರಿದಂತೆ ಸ್ವಂತ ಸ್ಟುಡಿಯೋ ಮಾಡಿಕೊಂಡು ಜೀವನ ಕಟ್ಟಿಕೊಂಡಿದ್ದಾರೆ. ಬದುಕಿನಲ್ಲಿ ಮತ್ತಷ್ಟು ಸಾಧನೆ ಮಾಡುವ ಹಂಬಲ ಹೊಂದಿದ್ದ ಎಚ್‌.ಆರ್‌. ಅರವಿಂದ್ ಅವರು, ಛಾಯಾಗ್ರಹಣ ಜೊತೆಯಲ್ಲಿಯೇ ಬೇಕರಿ ಉದ್ಯಮದತ್ತ ವಾಲಿದರು. ಆಗ ಸ್ಟುಡಿಯೋವನ್ನು ತಮ್ಮ ನೆಚ್ಚಿನ ಶಿಷ್ಯರಿಗೆ ವಹಿಸಿ ಬೇಕರಿ ಉದ್ಯಮ ಮಾಡಲು ಮುಂದಾದರು. ಆರ್ಥಿಕ ನೆರವು ಪಡೆಯಲು ಕುಟುಂಬದವರ ಬಳಿ ನಿರೀಕ್ಷೆ ವ್ಯಕ್ತಪಡಿಸಿದಾಗ ತಾಯಿ ಸರ್ವಮಂಗಳ ಅವರು ಹಣಕಾಸು ನೀಡಲು ನಿರಾಕರಿಸಿದರು. ಇದರಿಂದ ಅರವಿಂದ್ ಅವರಿಗೆ ದಿಕ್ಕು ತೋಚದಂತಾಯಿತು. ಬೇಕರಿ ಉದ್ಯಮ ಆರಂಭಿಸಬೇಕು ಎಂಬ ಹಠ ಕೈಬಿಡಲಿಲ್ಲ. ಇದರಿಂದ ಜೀವನದ ಕಷ್ಟ-ಸುಖ, ಸವಾಲುಗಳನ್ನು ಅಂಜದೆ, ಧೈರ್ಯದಿಂದ ಎದುರಿಸುವ ಅರಿವಿನ ಜೊತೆಗೆ ಸ್ಫೂರ್ತಿ ಹೆಚ್ಚಿಸಿಕೊಂಡರು. ನಂತರ ಜೀವನ, ಪ್ರೀತಿ, ಕುಟುಂಬ ಎಲ್ಲವನ್ನು ಸರಿದೂಗಿಸುವ ನಿರ್ಧಾರ ಮಾಡಿ ಸೋದರ ಮಾವ ಕೆ.ವಿ.ಮಹೇಶ್ ಅವರ ಸಹಕಾರದೊಂದಿಗೆ ಬೇಕರಿ ಉದ್ಯಮವನ್ನು ಆರಂಭಿಸಿಯೇ ಬಿಟ್ಟರು.

ಕೆಲವು ಅಡೆತಡೆಗಳು ಎದುರಾದರೂ ಪತ್ನಿ ಮಹಾಲಕ್ಷ್ಮಿ ಅವರು ಹೆಸರಿನಂತೆಯೇ ಅರವಿಂದ್ ಅವರಿಗೆ ಮಹಾಲಕ್ಷ್ಮಿಯಾಗಿಯೇ ಪತಿಗೆ ಸಹಕಾರ ನೀಡಿದರು. ಇದರಿಂದ ಬೇಕರಿ ಉದ್ಯಮವನ್ನು ಮುಂದುವರೆಸಿದ ಅರವಿಂದ್ ಅವರು, ಫೋಟೋಗ್ರಫಿ ಉದ್ಯಮದಲ್ಲಿದ್ದಾಗಲೂ ಜೊತೆಗಿದ್ದ ಹುಡುಗರನ್ನು ಸಹೋದರರಂತೆ ನೋಡಿಕೊಂಡಿದ್ದರು. ಅದರಂತೆ ಬೇಕರಿ ಉದ್ಯಮದಲ್ಲೂ ಜೊತೆಗಿದ್ದ ಕಾರ್ಮಿಕರನ್ನು ಅಣ್ಣತಮ್ಮಂದಿರಂತೆ ನೋಡಿಕೊಂಡರು. ಅಗತ್ಯ ಊಟೋಪಚಾರಗಳ ಜೊತೆಗೆ ಉಳಿದುಕೊಳ್ಳುವ ವ್ಯವಸ್ಥೆ ಮಾಡಿದ್ದರು. ಕಾರ್ಮಿಕರು ಸಹ ನಿಷ್ಠೆಯಿಂದ ದುಡಿದ ಪರಿಣಾಮ ಎಚ್‌.ಆರ್‌.ಅರವಿಂದ್ ಬೇಕರಿ ಉದ್ಯಮದಲ್ಲೂ ಯಶಸ್ಸು ಕಂಡರು. ಒಬ್ಬ ವ್ಯಕ್ತಿ ನಿರಂತರ ಪ್ರಯತ್ನ, ಹಠ, ಛಲ, ಸಾಧನೆ ಇದ್ದರೆ ಏನನ್ನೂ ಬೇಕಾದರೂ ಸಾಧಿಸಬಹುದು ಎಂಬುದಕ್ಕೆ ಅರವಿಂದ್ ಸಾಕ್ಷಿಯಾಗಿದ್ದಾರೆ.

ಬೇಕರಿ ಉದ್ಯಮದಲ್ಲೂ ಸಹ ಯಶಸ್ಸು : ಬೇಕರಿ ಉದ್ಯಮದಲ್ಲೂ ಸಹ ಯಶಸ್ಸು ಸುಲಭವಾಗಿ ಸಿಗಲಿಲ್ಲ. ಬೇಕರಿ ಮಾಲೀಕರ ಸಂಘದ ಸದಸ್ಯತ್ವವೂ ಸಿಗಲಿಲ್ಲ. ಮೊದ ಮೊದಲು ಸಾಕಷ್ಟು ಸಂಕಷ್ಟ ಅನುಭವಿಸಬೇಕಾಯಿತು. ಬೇಕರಿ ಉದ್ಯಮ ಚೆನ್ನಾಗಿ ನಡೆಯುತ್ತಿದ್ದರೂ ಸವಾಲುಗಳು ಎದುರಾದವು. ವಾಣಿಜ್ಯ ತೆರಿಗೆ ಇಲಾಖೆ ಅಧಿಕಾರಿಗಳು ಆಗಾಗ ದಾಳಿ ನಡೆಸುತ್ತಿದ್ದರು. ಬೇಕರಿ ವಾಹನವೂ ಅಪಘಾತಕ್ಕೀಡಾಯಿತು. ವಿದ್ಯುತ್ ಶಾರ್ಟ್ ಸರ್ಕ್ಯೂಟ್‌ನಿಂದ ಬೇಕರಿಗೆ ಬೆಂಕಿ ಬಿದ್ದು, ಅಪಾರ ಪ್ರಮಾಣದ ಪರಿಕರಗಳು ಸುಟ್ಟು ಹೋಗಿ ಸಾಕಷ್ಟು ನಷ್ಟ ಅನುಭವಿಸಬೇಕಾಯಿತು. ಇದರಿಂದ ಸಾಲದ ಹೊರೆ ಹೆಚ್ಚಾಗಿ 2004ರಲ್ಲಿ ಉದ್ಯಮ ತೊರೆಯುವ ಸ್ಥಿತಿಯೂ ಎದುರಾಯಿತು. ಉದ್ಯಮದ ತೊಂದರೆಯಲ್ಲಿದ್ದ ಅರವಿಂದ್ ಅವರಿಗೆ ಶಿವಮೊಗ್ಗದ ಸಚ್ಚಿದಾನಂದ ಸ್ವಾಮೀಜಿಗಳ ಮಾತುಗಳು ಅರವಿಂದ್ ಅವರ ಮನಸ್ಸಿನಲ್ಲಿ ಹೊಸ ಭರವಸೆಯನ್ನು ಹುಟ್ಟಿಸಿದ್ದವು. ಉದ್ಯಮವನ್ನು ಮತ್ತೆ ಕಟ್ಟಿ ಯಶಸ್ಸಿನತ್ತ ಕೊಂಡೊಯ್ಯಲು ಹಗಲಿರುಳು ಶ್ರಮಿಸಿದರು. ಆಗ ಸ್ನೇಹಿತ ಪದ್ಮಾಂಬದ ರವಿ ಬೇಕರಿ ಉತ್ಪನ್ನಗಳ ತಯಾರಿಕೆಗೆ ಬೇಕಾದ ವಸ್ತುಗಳನ್ನು ದೀರ್ಘಾವಧಿ ಸಾಲಕ್ಕೆ ನೀಡಿದ್ದರು. ಜೊತೆಗೆ ಮೈಸೂರಿನ ವಿನಾಯಕ ಟ್ರೇಡರ್ಸ್‌ನ ಮಾಲೀಕರಾದ ಉಮಾಕಾಂತ್ ಪೂರಾ ನೆರವಾಗಿದ್ದರು. ಅವರಿಬ್ಬರ ಸಹಾಯವನ್ನು ಅರವಿಂದ್ ಅವರು ಈಗಲೂ ಸ್ಮರಿಸುತ್ತಾರೆ.

ಪ್ರಸ್ತುತ ಬೇಕರಿ ಉದ್ಯಮದಲ್ಲಿ ಯಶಸ್ಸು ಕಂಡಿರುವ ಎಚ್‌. ಆರ್‌.ಅರವಿಂದ್, ತನ್ನ ತಾಯಿ ಸರ್ವಮಂಗಳ ಮತ್ತು ಪತ್ನಿ ಮಹಾಲಕ್ಷ್ಮಿ, ಪುತ್ರ, ಪುತ್ರಿಯೊಂದಿಗೆ ನೆಮ್ಮದಿಯ ಜೀವನ ನಡೆಸುತ್ತಿದ್ದಾರೆ. ಸಾಕಷ್ಟು ಏಳು-ಬೀಳುಗಳ ನಡುವೆ ಉದ್ಯಮ ರೂಪಿಸಿಕೊಂಡು ಸಾಕಷ್ಟು ಮಂದಿಗೆ ಜೀವನದ ಪಾಠದ ಜೊತೆಗೆ ಜೀವನ ರೂಪಿಸಿಕೊಳ್ಳಲು ದಾರಿ ಮಾಡಿಕೊಟ್ಟಿದ್ದಾರೆ.◆

## ರಾಜಕೀಯ ಯಶಸ್ಸಿನ ನಿರೀಕ್ಷೆಯಲ್ಲಿ ಅರವಿಂದ್

ಜನಪರ ಹೋರಾಟ, ಪಕ್ಷ ನಿಷ್ಠೆ ಜೊತೆಗೆ ತನ್ನ ಸುತ್ತಮುತ್ತ ಇರುವವರಿಗೆ ಬೇಕರಿಯ ಸಿಹಿ ತಿನಿಸುಗಳಂತೆ ಸ್ನೇಹದ ಸಿಹಿ ಹಂಚುತ್ತಾ ದೊಡ್ಡ ಬಳಗವನ್ನೇ ಹೊಂದಿದ್ದಾರೆ. ಬಿಜೆಪಿ ಪಕ್ಷದ ಕಟ್ಟಾಳು ಆಗಿ ಗುರುತಿಸಿಕೊಂಡಿದ್ದಾರೆ. ಉದ್ಯಮದ ಜೊತೆಗೆ ರಾಜಕೀಯದಲ್ಲೂ ಗುರುತಿಸಿಕೊಂಡಿರುವ ಅವರು, ಬಿಜೆಪಿ ನಗರ ಘಟಕ ಅಧ್ಯಕ್ಷರಾಗಿ ಪಕ್ಷ ಸಂಘಟನೆಗೆ ಒತ್ತು ನೀಡುವ ಮೂಲಕ ನಗರಸಭೆ ಚುನಾವಣೆಯಲ್ಲಿ ಬಿಜೆಪಿ ಅಭ್ಯರ್ಥಿಗಳ ಗೆಲುವಿಗೆ ಪ್ರಾಮಾಣಿಕ ಪ್ರಯತ್ನ ಮಾಡಿದ್ದರು. ಇದರಿಂದ ನಗರಸಭೆಯಲ್ಲಿ ಬಿಜೆಪಿ ಅಭ್ಯರ್ಥಿಗಳು ಸದಸ್ಯರಾಗಲು ಕಾರಣಕರ್ತರಾಗಿದ್ದರು. ಇದೀಗ ಪಕ್ಷದ ನಿಷ್ಠಾವಂತರಾಗಿ ಪ್ರತೀ ಹೋರಾಟ ಗಳಲ್ಲೂ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದು, ಮುಂದಿನ ದಿನಗಳಲ್ಲಿ ರಾಜಕೀಯದಲ್ಲೂ ಯಶಸ್ಸಿನ ನಿರೀಕ್ಷೆಯಲ್ಲಿದ್ದಾರೆ.







# ಗೋಸಾಯಿ ಘಾಟ್

## ಸಾಧು, ಸಂತರು ಜಪ, ತಪ ಮಾಡುತ್ತಿದ್ದ ಪುಣ್ಯ ಕ್ಷೇತ್ರ



■ ಗಂಜಾಂ ಮಂಜು,
ಶ್ರೀರಂಗಪಟ್ಟಣ

**ಗೋಸಾಯಿ ಘಾಟ್ ಒಂದು ಸುಂದರ ಪವಿತ್ರ ಕ್ಷೇತ್ರ. ಹಲವಾರು ಸಾಧು–ಸಂತರು, ಉತ್ತರ ಭಾರತದ ಸನ್ಯಾಸಿಗಳು ತಪಸ್ಸು ಮಾಡಿದಂತಹ ಪುಣ್ಯ ಸ್ಥಳ. ಘಾಟ್‌ನಲ್ಲಿ ಉತ್ತರ ಭಾರತದ ಕಡೆಯಿಂದ ಬಂದ ಶ್ರೀ ಉದಯ ಭಾರತಿ ಸ್ವಾಮಿ ಕಾಶಿಯಿಂದ ತರಿಸಿ ಪ್ರತಿಷ್ಠಾಪಿಸಿರುವ ಶಿವಲಿಂಗಕ್ಕೆ ಇಂದಿಗೂ ಪೂಜೆ ನೆರವೇರುತ್ತಿವೆ.**



ಶ್ರೀರಂಗಪಟ್ಟಣದ ದಕ್ಷಿಣ ಕಾವೇರಿ ನದಿ ತೀರದ 'ಗೋಸಾಯಿ ಘಾಟ್' ಎಂಬುದು ದಕ್ಷಿಣ ಕಾವೇರಿ ದಂಡೆ ಮೇಲಿರುವ ಒಂದು ಸುಂದರ ಪವಿತ್ರ ಕ್ಷೇತ್ರ. ಹಿಂದಿನ ಕಾಲದಲ್ಲಿ ಇಲ್ಲಿಗೆ ಸಾಧುಸಂತರು, ಭಾವಾಜಿಗಳು ಜಪ ತಪಗಳನ್ನು ಮಾಡುತ್ತಿದ್ದರು.

ಅವರಿಗೆ ತೃಪ್ತಿಯಾಗುವ ದಿವಸ ಇಲ್ಲಿಯೇ ಅವರ ವಾಸ ಸ್ಥಳವಾಗಿತ್ತು. ಅವರ ಪೈಕಿ ಉತ್ತರ ಭಾರತದ ಕಡೆಯಿಂದ ಬಂದ ಶ್ರೀ ಉದಯಭಾರತಿ ಸ್ವಾಮಿ ಎಂಬ ವಾದಿಗಳು ಪ್ರಖ್ಯಾತ ಸನ್ಯಾಸಿಗಳಾ ಗಿದ್ದರು. ಅವರ ಬಳಿ ಶಿಷ್ಯವೃಂದವೂ ಇತ್ತು. ಸಾಕಷ್ಟು ದ್ರವ್ಯವೂ ಅವರ ಬಳಿಯಿತ್ತು. ಅದೆಲ್ಲಾ ಸದ್ವಿನಿಯೋ ಗವಾಗಬೇಕೆಂಬ ಬಯಕೆ ಅವರದ್ದು. ಇಲ್ಲಿನ ಪರಿಸರ ಸೌಂದರ್ಯ ಅವರ ಮನಸ್ಸಿಗೆ ಹಿತ ನೀಡಿದ ಕಾರಣ ಇಲ್ಲಿಯೇ ಒಂದು ಶಿವಾಲಯ ನಿರ್ಮಿಸಿದರು.

### ಪಿತೃಪಕ್ಷ ಪೂಜೆಗೆ ಪಶ್ಚಿಮವಾಹಿನಿ ಸೂಕ್ತ ಸ್ಥಳ

ಪಶ್ಚಿಮವಾಹಿನಿಯಲ್ಲಿ ಮಹಾತ್ಮ ಗಾಂಧಿ ಚಿತಾಭಸ್ಮ ಬಿಟ್ಟ ಸ್ಥಳ ಇದಾಗಿದೆ. ದೇಶದಲ್ಲಿ ಉನ್ನತ ಸ್ಥಾನದಲ್ಲಿರುವವರು, ಗಣ್ಯರ ನಿಧನದ ನಂತರ ಅವರ ಚಿತಾಭಸ್ಮವನ್ನು ಪಶ್ಚಿಮ ವಾಹಿನಿಯಲ್ಲಿ ಪಶ್ಚಿಮದಿಕ್ಕಿಗೆ ಹರಿಯುವ ಕಾವೇರಿ ನದಿಯಲ್ಲಿ ಬಿಡುವುದು ಹಾಗೂ ಪಿತೃಪಕ್ಷದ ಪೂಜೆ ಸಲ್ಲಿಸುವುದು ಅನಾದಿ ಕಾಲದಿಂದಲೂ ನಡೆದುಕೊಂಡು ಬಂದಿದೆ. ಇಲ್ಲಿ ಅಸ್ತಿ ವಿಸರ್ಜನೆ ಮಾಡಿದರೆ ಮಾತ್ರ ಮೃತರ ಆತ್ಮಕ್ಕೆ ಶಾಂತಿ ದೊರೆಯುತ್ತದೆ ಎಂಬ ನಂಬಿಕೆ ನೆಲೆಯೂರಿದೆ. ಇದರಿಂದಲೇ ಪಶ್ಚಿಮವಾಹಿನಿ ಕೂಡ ದೇಶದ ಗಣ್ಯರ ಚಿತಾಭಸ್ಮ ಬಿಟ್ಟ ಸ್ಥಳವಾಗಿ ಹೆಸರುಗಳಿಸಿದೆ. ಈಗಲೂ ಗಾಂಧಿ ಚಿತಾ ಭಸ್ಮ ಸ್ಥಳವನ್ನು ಸ್ಮಾರಕ ಮಾಡಬೇಕೆಂದು ಜನರ ಒತ್ತಾಯವಾಗಿದೆ. ಚಿತಾಭಸ್ಮ ಬಿಟ್ಟ ಸ್ಥಳದಲ್ಲಿ ಒಂದು ಕಲ್ಲಿನ ಸ್ಮಾರಕದ ಗುರುತು ಮಾಡಿದ್ದು, ಪ್ರತಿ ವರ್ಷ ಅ.2ರಂದು ಪುರಸಭೆ ಅಧಿಕಾರಿಗಳು ಪುಷ್ಪಾರ್ಚನೆ ಮಾಡುವುದದರ ಜೊತೆಗೆ ಸ್ಥಳೀಯ ಗಾಂಧಿವಾದಿಗಳು ಪೂಜೆ ಸಲ್ಲಿಸುತ್ತಾರೆ. ಜೊತೆ ಗಾಂಧಿ ನೆನಪಿನ ಸರ್ವೋದಯ ಮೇಳವನ್ನು ಕೂಡ ನಡೆಸಿಕೊಂಡು ಬರುತ್ತಿದ್ದಾರೆ.

### ಪಿಂಡ ಪ್ರದಾನದಿಂದ ಮುಕ್ತಿ

ಪಟ್ಟಣ ಮತ್ತು ಗಂಜಾಂ ಸುತ್ತಲು ಹರಿದು ಬಂದ ಉತ್ತರ ಕಾವೇರಿ ಹಾಗೂ ದಕ್ಷಿಣ ಕಾವೇರಿ ಜತೆಗೆ ಲೋಕಪಾವನಿ ನದಿ ಒಂದೆಡೆ ಸೇರುವ ಸ್ಥಳವೇ ಸಂಗಮ. ಕಾವೇರಿ ಸಂಗಮಕ್ಕೆ ಬಂದು ಪೂಜೆ ಸಲ್ಲಿಸಿದರೆ ಮುಕ್ತಿ ಸಿಗುತ್ತದೆ ಎಂಬುದು ವಾಡಿಕೆ. ಇಲ್ಲಿ ಪಿಂಡ ಪ್ರದಾನ ಹಾಗೂ ವಿಶೇಷ ಪೂಜೆಗಳನ್ನು ಮಾಡುತ್ತಿದ್ದು ಪವಿತ್ರವಾದ ಕಾವೇರಿ ಮಾತೆಗೆ ಪೂಜೆ ಸಲ್ಲಿಸುವ ಜಾಗವಾಗಿದೆ. ಇದರ ಜೊತೆ ಕೂಡಲ ಸಂಗಮದಂತೆ ಪವಿತ್ರ ಕಾವೇರಿ ಆರತಿ ಪೂಜೆಗಳು ನಡೆಯುತ್ತವೆ. ಇತ್ತ ಪ್ರವಾಸಿ ತಾಣವೂ ಆಗಿರುವುದರಿಂದ ತಮಿಳುನಾಡು, ಆಂಧ್ರ ಹಾಗೂ ಕೇರಳದ ಮಂದಿ ಇಲ್ಲಿಗೆ ಬಂದು ಸ್ನಾನ ಮಡಿ ಮಾಡಿ ಪೂಜೆ ಸಲ್ಲಿಸುತ್ತಾರೆ. ◆



# ಗಂಗಾರತಿ ಮಾದರಿಯಲ್ಲಿ ಕಾವೇರಿ ಆರತಿ

ಶ್ರೀರಂಗಪಟ್ಟಣ ದಸರಾ ಮಹೋತ್ಸವ ಅಂಗವಾಗಿ ಪಟ್ಟಣದ ಸ್ನಾನಘಟ್ಟದಲ್ಲಿನ ಕಾವೇರಿ ಮಾತೆಗೆ ಉತ್ತರ ಭಾರ ತದ ಗಂಗಾರತಿ ಮಾದರಿಯಲ್ಲಿ 15ಕ್ಕೂ ಹೆಚ್ಚು ವೈದಿಕರ ತಂಡ ದೊಂದಿಗೆ ಕಾವೇರಿ ಆರತಿಗೆ ಜಿಲ್ಲಾಡಳಿತದಿಂದ ಅಧಿಕೃತವಾಗಿ ಚಾಲನೆ ನೀಡಲಾಯಿತು. ವೇದಬ್ರಹ್ಮ ಡಾ. ಭಾನುಪ್ರಕಾಶ್‌ಶರ್ಮಾ ಸಾರಥ್ಯದ ವೈದಿಕರ ತಂಡವು ಇಲ್ಲಿನ ಕಾವೇರಿ ನದಿಗೆ ವಿಧಿ ವಿಧಾನಗಳ ಮೂಲಕ ಗಂಧದಕಟ್ಟಿ ಪೂಜೆ, ಧೂಪಾರತಿ, ಕರ್ಪೂರದ ಆರತಿ ಬೆಳಗಿ ಕಾವೇರಿ ಮಾತೆಗೆ ನಮನ ಸಲ್ಲಿಸಿದರು. ಗಣಪತಿ ಪ್ರಾರ್ಥನೆ, ಅಸ್ಟೋತ್ತರ ಪೂಜೆ, ದೂಪ ದೀಪಗ ಳೊಂದಿಗೆ ಕಾವೇರಿ ಮಾತೆಗೆ ಸಂಕಲ್ಪ ಮಾಡಲಾ ಯಿತು. ಪಟ್ಟಣದಲ್ಲಿ ದಸರಾ ಮಹೋತ್ಸವ ನಡೆಯುವ ಹಾಗೆ ಕಾವೇರಿ ನದಿಗೆ 5 ದಿನಗಳ ಕಾಲ ನಡೆಸಲಾಗಯಿತು.

ಉತ್ತರ ಭಾರತದಲ್ಲಿನ ಗಂಗಾರತಿ ಮಾದರಿಯಲ್ಲಿ ದಕ್ಷಣ ಭಾರತದಲ್ಲಿ ಪ್ರಥಮ ಭಾರಿಗೆ ಭಾಗಮಂಡಲದಿಂದ ಪುಂಪಾರ್‌ಗೆ ಹರಿಯುವ ಕಾವೇರಿ ನದಿಗೆ ನಮನ ಸಲ್ಲಿಸುವ ಸಲುವಾಗಿ ಕಾವೇರಿ ಆರತಿ ನಡೆಸಲಾಯಿತು. ಶಾಶ್ವತಿ ಧಾರ್ಮಿಕ ಕ್ರಿಯಾಸಮಿತಿಯಿಂದ ಪ್ರತಿ ವರ್ಷ ತುಲಾಮಾಸದಲ್ಲಿ ಕಾವೇರಿ ಆರತಿ ಮಾಡಲಾಗುತ್ತಿತ್ತು. ಆದರೆ, ದಸರಾ ಹಿನ್ನಲೆ ಒಂದು ತಿಂಗಳು ಮುಂಚಿತವಾಗಿ ಆಚರಣೆ ಮಾಡಲಾಗಿದೆ.



# ಮಹದೇವಪುರ ಎಂಬ ಸಿನಿಮಾ ಗ್ರಾಮ

## 90ರ ದಶಕದಲ್ಲಿ ಸಿನಿಲೋಕಕ್ಕೆ ಅಚ್ಚು ಮೆಚ್ಚಿನ ಸ್ಥಳ

## ಚಿತ್ರರಂಗಕ್ಕೆ ಜೀವ ತುಂಬಿದ ಗ್ರಾಮ

ಮಂಡ್ಯ ಜಿಲೆಯ ಶ್ರೀರಂಗಪಟ್ಟಣ ಅಂದರೆ ಸಿನಿಮಾ ಲೋಕಕ್ಕೆ ಅಚ್ಚು ಮೆಚ್ಚಿನ ಸ್ಥಳವಾಗಿದೆ. ಹೆಸರಾಂತ ಕಲಾವಿದರು ಸೇರಿದಂತೆ ಚಿತ್ರ ನಿರ್ಮಿಸುವ ನಿರ್ದೇಶಕರಿಂದ ಕಲಾವಿದರಿಗೆ ಈ ಭಾಗದಲ್ಲಿ ಚಿತ್ರೀಕರಣ ಮಾಡಬೇಕು ಎಂಬ ಹಂಬಲದೊಂದಿಗೆ ಈ ಭಾಗದಲ್ಲಿ ಒಂದು ದೃಶ್ಯವಾದರೂ ಚಿತ್ರಿಕರಿಸುವ ಕೆಲಸಕ್ಕೆ ಮುಂದಾಗುತ್ತಿದ್ದರು.

1985 ರಿಂದ 2008ರವರೆಗೂ ಈ ಗ್ರಾಮದಲ್ಲಿ ಪ್ರತಿ ದಿನ ಸಿನಿಮಾ ಚಿತ್ರೀಕರಣಗಳು ನಡೆಯುತ್ತಿದ್ದವು. ಅಲ್ಲಲ್ಲಿ ಸಿನಿಮಾ ಸೆಟ್‌ಗಳನ್ನು ಹಾಕುವುದೇ ಕೆಲಸವಾಗಿತ್ತು. ನೂರಾರು ಸಿನಿಮಾ, ಹತ್ತಾರು ಧಾರವಾಹಿಗಳು ಹಾಗೂ ಮದುವೆ ಸೆಟ್‌ಗಳಿಗೆ ಇಲ್ಲಿನ ಸ್ಥಳಗಳು ಹೇಳಿ ಮಾಡಿಸಿವೆ.

**ಒಂದು ಸಿನಿಮಾ ಗ್ರಾಮ:** ಶ್ರೀರಂಗಪಟ್ಟಣ ತಾಲೂಕಿನ ಮೈಸೂರಿಗೂ ಹತ್ತಿರವಿರುವ ಮಹದೇವಪುರ ಎಂಬ ಗ್ರಾಮ ಮಿನಿ ಸ್ಯಾಂಡಲ್‌ವುಡ್ ಇದ್ದ ಹಾಗೆ. ಪ್ರಮುಖವಾಗಿ ಇಲ್ಲಿನ 6 ಮನೆಗಳಲ್ಲಿ ಕನ್ನಡ ಸೇರಿದಂತೆ ಪರಭಾಷಾ ಚಿತ್ರಗಳೂ ಶೂಟಿಂಗ್ ಕಂಡಿವೆ. ಒಡಹುಟ್ಟಿದವರು, ಕಾಮನಬಿಲ್ಲು, ಕರ್ಪೂರದ ಗೊಂಬೆ, ಚಿನ್ನಾರಿಮುತ್ತ, ಮನಮೆಚ್ಚಿದ ಹುಡುಗಿ, ಚಂದನದ ಗೊಂಬೆ, ಬೆಂಕಿಯ ಬಲೆ, ಜನುಮದ ಜೋಡಿ, ರಾಮಾಚಾರಿ, ಸಿಂಧೂರ ತಿಲಕ, ಹಳ್ಳಿಮೇಷ್ಟ್ರು, ನಂಜುಂಡಿ ಕಲ್ಯಾಣ, ಅಂಜದ ಗಂಡು, ಬೇವುಬೆಲ್ಲ, ರೌಡಿ ಎಂ.ಎಲ್.ಎ, ಜನುಮದ ಜೋಡಿ, ಸಾಹುಕಾರ– ಇನ್ನೂ ಮುಂತಾದ ಚಿತ್ರಗಳು ಆ್ಯಕ್ಷನ್ ಕಟ್ ಹೇಳಿಸಿಕೊಂಡಿದ್ದು ಕೂಡ ಇಲ್ಲಿಯೇ.

ಅಲ್ಲದೆ ಸೂಪರ್ ಸ್ಟಾರ್ ರಜನಿಕಾಂತ್ ನಟನೆಯ 'ರಾಜಾಧಿರಾಜ', 'ಲಿಂಗಾ', ಹಾಲಿವುಡ್ ಸೇರಿದಂತೆ ಅನೇಕ ಚಿತ್ರಗಳನ್ನು ಈ ಗ್ರಾಮದಲ್ಲೇ ಸೆರೆಹಿಡಿದಿದ್ದಾರೆ. ಹಳ್ಳಿ ಸೊಬಗಿನ ಈ ಗ್ರಾಮದ ಪಕ್ಕದಲ್ಲೇ ಕಾವೇರಿ ನದಿ ಹರಿಯುತ್ತಿದ್ದು ಗತವೈಭವದ ಚೆಲುವು ಸಾರುವ ಹಳ್ಳಿ ಅರಮನೆ, ಐತಿಹಾಸಿಕ ದೇಗುಲಗಳು, ತಣ್ಣನೆಯ ಕೊಳಗಳು, ಜಲಪಾತದಂತಿರುವ ರಾಮಸ್ವಾಮಿ ಅಣೆಕಟ್ಟೆ, ಹಸಿರು ಹೊದ್ದು ನಿಂತಿರುವ ತೆಂಗಿನ ಮರದ ಸಾಲುಗಳು, ಹಳ್ಳಿಯ ನೈಜತೆಯನ್ನು ಬಿಂಬಿಸುವ ಗ್ರಾಮೀಣ ಸೊಗಡು, ದೊಡ್ಡ ತೊಟ್ಟಿಮನೆಗಳು ಏನುಂಟು ಏನಿಲ್ಲಾ... ಒಂದು ಸಿನಿಮಾ ಚಿತ್ರೀಕರಿಸಲು ಬೇಕಾದ ಎಲ್ಲ ನೈಸರ್ಗಿಕ ಸೊಬಗನ್ನು ಸವಿಯಲು ಮಹದೇವಪುರ ಬಿಟ್ಟರೆ ಮತ್ತೊಂದು ಗ್ರಾಮವಿಲ್ಲ.

**ಈಗ ಶೂಟಿಂಗ್ ಇಲ್ಲ:** ಸಿನಿಮಾ ಚಿತ್ರ ರಂಗಕ್ಕೆ ಅಗತ್ಯವಾಗಿ ಬೇಕಿದ್ದ ಗ್ರಾಮದಲ್ಲಿ ಇದೀಗ ಯಾವುದೇ ಸಿನಿಮಾಗಳ ಚಿತ್ರೀಕರಣ ವಿರಳವಾಗಿದೆ. ಗ್ರಾಮೀಣ ಸೊಬಗಿನ ಚಿತ್ರಗಳು ನಡೆಯುತ್ತಿಲ್ಲದೆ 2008ರ ನಂತರ ಗ್ರಾಮದ ಬಂಗಲೇ ಮನೆಯಲ್ಲಿ ಯಾವುದೇ ಶೂಟಿಂಗ್ ನಡೆದಿಲ್ಲ. ◆

# ಮಂಡ್ಯ ಶಿಕ್ಷಣದ ಹೆಮ್ಮೆ

# ಜನತಾ ಶಿಕ್ಷಣ ಟ್ರಸ್ಟ್

## ವಿದ್ಯಾರ್ಥಿಗಳಿಗೆ ಜ್ಞಾನಸಿಂಧುವಾಗಿ ಹೆಮ್ಮರವಾಗಿ ಬೆಳೆಯುತ್ತಿರುವ ಸಂಸ್ಥೆ



ಕೆ.ವಿ.ಶಂಕರಗೌಡ ನೇತೃತ್ವದಲ್ಲಿ ಹುಟ್ಟಿಕೊಂಡ ಜನತಾ ಶಿಕ್ಷಣ ಟ್ರಸ್ಟ್ ಇಂದು ಹೆಮ್ಮರವಾಗಿ ಬೆಳೆದು ನಿಂತಿದ್ದು, ನಗರ ಹಾಗೂ ಗ್ರಾಮೀಣ ವಿದ್ಯಾರ್ಥಿಗಳಿಗೂ ಗುಣಮಟ್ಟದ ಶಿಕ್ಷಣ ನೀಡುವಲ್ಲಿ ಯಶಸ್ವಿಯಾಗಿ ಮುಂದುವರಿಸಿದೆ.

ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ದೂರದರ್ಶಿತ್ವ ಮತ್ತು ಕಾಳಜಿಯ ಫಲವಾಗಿ ಮತ್ತು ಸರ್ ಎಂ.ವಿಶ್ವೇಶ್ವರಯ್ಯ ಅವರ ಪರಿಶ್ರಮದಿಂದಾಗಿ ಕೆಆರ್‌ಎಸ್ ಜಲಾಶಯದ ನಿರ್ಮಾಣದಿಂದಾಗಿ ಬೆಂಗಾಡಾಗಿದ್ದ ಮಂಡ್ಯ ಜಿಲ್ಲೆಯು 'ಸಕ್ಕರೆಯ ನಾಡು-ಭತ್ತದ ಕಣಜ' ಎಂಬ ಅನ್ವರ್ಥ ನಾಮಗಳಿಗೆ ಪಾತ್ರವಾಯಿತು. ಇದರಿಂದ ಹೊಟ್ಟೆಗೆ ಮೂರು ಹೊತ್ತಿನ ಊಟಕ್ಕೆ ವ್ಯವಸ್ಥೆಯಾಯಿತು. ಆದರೆ ವಿಚಾರವಂತಿಕೆಗೆ ಪೂರಕವಾದ ಶಿಕ್ಷಣದ ಕೊರತೆ ಮಂಡ್ಯ ನಾಡಿನಲ್ಲಿ ಎದ್ದು ಕಾಣುತ್ತಿತ್ತು.

### 1958ರಲ್ಲಿ ಜನತಾ ಶಿಕ್ಷಣ ಸಂಸ್ಥೆ ಆರಂಭ

ಇಂಥ ಸಂದಿಗ್ಧ ಸಂದರ್ಭದಲ್ಲಿ ವಿದ್ಯಾದಾನಿ, ಚಿಂತಕರು, ರಾಜಕೀಯ ಮುತ್ಸದ್ದಿಗಳು, ಶಿಕ್ಷಣ ತಜ್ಞರು, ಸಾಹಿತಿಗಳು, ರಂಗನಟರು, ಮಹಾ ಮಾನವತಾ ಮೂರ್ತಿಗಳು, ಆಧುನಿಕ ಮಂಡ್ಯದ ಶಿಲ್ಪಿಗಳು ಆದ ನಿತ್ಯಸಚಿವ ಕೆ.ವಿ.ಶಂಕರಗೌಡರು ಜಿಲ್ಲೆಯ ಮುಗ್ಧ ಜನರ ಶಿಕ್ಷಣದ ಹಸಿವನ್ನು ನೀಗಿಸಲೇಬೇಕು ಎಂಬ ಹಠದೊಂದಿಗೆ ಹೊಟ್ಟೆ ತುಂಬಿದ ನಂತರ ಮಸ್ತಕ ತುಂಬಬೇಕು' ಎಂಬ ಆಲೋಚನೆಯೊಂದಿಗೆ ಮಂಡ್ಯದ ಮಕ್ಕಳಿಗೆ ಉತ್ತಮ ಮತ್ತು ಉನ್ನತ ಶಿಕ್ಷಣ ನೀಡಬೇಕೆಂಬ ನಿಟ್ಟಿನಲ್ಲಿ ಸಮಾನ ಮನಸ್ಕ ಗೆಳೆಯರೊಂದಿಗೆ 1958ರಲ್ಲಿ ಜನತಾ ಶಿಕ್ಷಣ ಸಂಸ್ಥೆಯನ್ನು ಆರಂಭಿಸಿದರು.

ಶಿಕ್ಷಣ ಸಂಸ್ಥೆಯ ಆರಂಭಕ್ಕೆ ಅವಶ್ಯಕವಿದ್ದ ಜಾಗಕ್ಕೆ ಹುಡುಕಾಡುತ್ತಿದ್ದಾಗ ಕೊಮ್ಮೇರಹಳ್ಳಿಯ ಕೆ.ಸಿ.ಲಿಂಗೇಗೌಡರಿಂದ 1943ರಲ್ಲಿ ದಾನ ಪಡೆದ ಜಾಗದಲ್ಲಿ ಒಕ್ಕಲಿಗರ ಸಾರ್ವಜನಿಕ ವಿದ್ಯಾರ್ಥಿ ಮಂದಿರದ ಜೊತೆಗೆ ಪಿಇಎಸ್ ಇಂಜಿನಿಯರಿಂಗ್ ಕಾಲೇಜನ್ನು 1962ರಲ್ಲಿ ಕೆ.ಸಿಂಗಾರಿಗೌಡರು, ಬೊಮ್ಮೆಗೌಡರು, ಡಾ.ಎಚ್.ಡಿ.ಚೌಡಯ್ಯರವರು, ಎಚ್.ವಿ.ವೀರೇಗೌಡರು, ಎಂ.ಕೆ.ಶಿವನಂಜಪ್ಪ, ಮಲ್ಲಿಗೆರೆ ಪಾಪೇಗೌಡರು ಇತರೆ ಸ್ನೇಹಿತರೊಂದಿಗೆ ಕೆ.ವಿ.ಶಂಕರಗೌಡರು ಸಂಸ್ಥೆಯನ್ನು ಕಟ್ಟಿ ಬೆಳೆಸಿದರು. ಪಿಇಎಸ್ ಇಂಜಿನಿಯರಿಂಗ್ ಕಾಲೇಜು, ಪಿ.ಇ.ಎಸ್. ವಿಜ್ಞಾನ, ಕಲಾ ಮತ್ತು ವಾಣಿಜ್ಯ ಕಾಲೇಜು, ಪಿಇಎಸ್ ಪದವಿಪೂರ್ವ ಕಾಲೇಜು, ಪಿಇಎಸ್ ಕಾನೂನು ಕಾಲೇಜು, ಪಿ.ಇ.ಎಸ್. ಪ್ರೌಢಶಾಲೆ, ಕೆ.ವಿ.ಶಂಕರಗೌಡ ಶಿಕ್ಷಣ ಕಾಲೇಜು ಹೀಗೆ ಹಲವು ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ಜ್ಞಾನದಾಹಿಗಳಿಗೆ ವಿದ್ಯಾದೀವಿಗೆಯಾದರು.

ಕೆ.ವಿ.ಶಂಕರಗೌಡರು ತಮ್ಮ ಅಂತಿಮ ಕಾಲಘಟ್ಟದಲ್ಲಿ ಡಾ.ಎಚ್.ಡಿ.ಚೌಡಯ್ಯ ಅವರ ಸುಪರ್ದಿಗೆ ಜನತಾ ಶಿಕ್ಷಣ ಟ್ರಸ್ಟಿನ ಹೊಣೆಗಾರಿಕೆಯನ್ನು ವಿನಿಯೋಗಿಸಿದ ನಂತರ ಶಂಕರಗೌಡರ ಆಶಯದಂತೆ ಡಾ.ಎಚ್.ಡಿ.ಚೌಡಯ್ಯ ಅವರು ಸುಮಾರು 30 ವರ್ಷಗಳ ಕಾಲ ಸುದೀರ್ಘವಾಗಿ ಸಮರ್ಥವಾಗಿ ಸಂಸ್ಥೆಯನ್ನು ಮುನ್ನಡೆಸಿದರು. ಇವರು ಜನತಾ ಶಿಕ್ಷಣ ಟ್ರಸ್ಟ್ ಅಕ್ಷರ ದಾಸೋಹಕ್ಕೆ ಮಾತ್ರವಲ್ಲದೆ ಆಟೋಟಗಳಿಗೆ ಅನುಕೂಲವಾಗುವಂತೆ ಪಿ.ಇ.ಟಿ ಕ್ರೀಡಾ ಸಮುಚ್ಚಯವನ್ನು ನಿರ್ಮಿಸಿ ಕ್ರೀಡೆಗೆ ಮಹತ್ವವನ್ನು ಒದಗಿಸಿಕೊಟ್ಟಿದ್ದಾರೆ.

## ತಾತನ ಹಾದಿಯಲ್ಲಿ ಕೆ.ಎಸ್.ವಿಜಯ್ ಆನಂದ್

ಸಾಂಸ್ಕೃತಿಕ ಲೋಕದಲ್ಲಿ ಅದ್ಭುತ ಕೃಷಿಯನ್ನು ಮಾಡಿ ಮಂಡ್ಯವನ್ನು ಸಾಂಸ್ಕೃತಿಕವಾಗಿ ಮುನ್ನೆಲೆಗೆ ತರುವಲ್ಲಿ ಜೀವನವನ್ನು ಮುಡುಪಾಗಿಟ್ಟ ತಾತ ಹಾಗೂ ತನ್ನ ತಂದೆಯ ಆಶಯದಂತೆ ಶೈಕ್ಷಣಿಕವಾಗಿ ಮಂಡ್ಯವನ್ನು ಮುಂಚೂಣಿಯಲ್ಲಿರಿಸಲು, ಪಿ.ಇ.ಟಿ. ಅಭಿವೃದ್ಧಿಯಾಗಲು ಅವಿರತ ಶ್ರಮಿಸಿದ ಕೆ.ವಿ.ಶಂಕರಗೌಡರ ಸುಪುತ್ರರಾದ ಸಾಂಸ್ಕೃತಿಕ ಮನಸ್ಸಿನ ಕೆ.ಎಸ್.ಸಚ್ಚಿದಾನಂದರವರ ಮಗ ಜಿಲ್ಲಾ ಪಂಚಾಯತ್ ಸದಸ್ಯರಾಗಿ, ಜಿಲ್ಲಾ ಪಂಚಾಯತ್ ಸ್ಥಾಯಿ ಸಮಿತಿಯ ಅಧ್ಯಕ್ಷರಾಗಿ ಪ್ರಾಮಾಣಿಕವಾಗಿ ಅತ್ಯದ್ಭುತ ಸಾಮಾಜಿಕ ಕಾರ್ಯಗಳನ್ನು ಮಾಡುವ ಮೂಲಕ ತನ್ನ ತಾತ ಮತ್ತು ತಂದೆಯ ಹಾದಿಯಲ್ಲೇ ಸಂಸ್ಥೆ ಮತ್ತು ಸಮಾಜದ ಶ್ರೇಯೋಭಿವೃದ್ಧಿಗಾಗಿ ದುಡಿಯುತ್ತಿರುವ ಕೆ.ಎಸ್.ವಿಜಯ್ ಆನಂದ್ ಅವರ ಅಧ್ಯಕ್ಷತೆಯಲ್ಲಿ ಪ್ರಸ್ತುತ ಜನತಾ ಶಿಕ್ಷಣ ಟ್ರಸ್ಟ್ ಮುಂಚೂಣಿಯತ್ತ ದಾಪುಗಾಲು ಹಾಕುತ್ತಿದೆ.

### ಅಗತ್ಯವಿದ್ದ ಹಣ ಸಂಗ್ರಹ

1962ರಲ್ಲಿ ಎಂಜಿನಿಯರಿಂಗ್ ಕಾಲೇಜನ್ನು ಸ್ಥಾಪಿಸಲು ಯೋಜಿಸಿದ ಸಂದರ್ಭದಲ್ಲಿ ಹಣಕಾಸಿನ ಕೊರತೆಯಾದಾಗ ಕೆ.ವಿ.ಶಂಕರಗೌಡರ ನೇತೃತ್ವದಲ್ಲಿ ಅವರ ಸ್ನೇಹಿತರೆಲ್ಲ ಸೇರಿ ದಾನಶೀಲಕರ್ಣ ನಾಟಕವನ್ನು ಪ್ರದರ್ಶಿಸಿ ಸ್ವತಃ ಶಂಕರಗೌಡರು ಕರ್ಣನ ಪಾತ್ರದಲ್ಲಿ ಅಭಿನಯಿಸಿ ಕಾಲೇಜು ಕಟ್ಟಡಕ್ಕೆ ಅಗತ್ಯವಿದ್ದ ಹಣವನ್ನು ಸಂಗ್ರಹಿಸಿ ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್.ನಿಜಲಿಂಗಪ್ಪ ಅವರಿಂದ ಶಂಕರಗೌಡರು ಕಾಲೇಜಿನ ಪ್ರಾರಂಭೋತ್ಸವ ನೆರವೇರಿಸಿದರು.

ಸಿವಿಲ್, ಮೆಕ್ಯಾನಿಕಲ್, ಎಲೆಕ್ಟ್ರಿಕಲ್ ಈ 3 ಕೋರ್ಸ್‌ಗಳಿಂದ ಆರಂಭಗೊಂಡ ಕಾಲೇಜು ಇಂದು ಎಲೆಕ್ಟ್ರಾನಿಕ್ಸ್ ಆಂಡ್ ಕಮ್ಯುನಿಕೇಶನ್, ಆಟೋಮೊಬೈಲ್, ಕೈಗಾರಿಕೋತ್ಪತ್ತಿ (ಐಪಿ), ಕಂಪ್ಯೂಟರ್ ಸೈನ್ಸ್, ಇನರ್ಮೇಶನ್ ಸೈನ್ಸ್, ಎ.ಐ.ಎಂ.ಎಲ್, ಡೇಟಾ ಸೈನ್ಸ್, ಕಂಪ್ಯೂಟರ್ ಸೈನ್ಸ್ ಮತ್ತು ಬ್ಯುಸಿನೆಸ್ ಸಿಸ್ಟಮ್ಸ್, ಎಂ.ಸಿ.ಎ., ಎಂ.ಬಿ.ಎ., ಎಂ.ಟೆಕ್ ಪದವಿ ಮತ್ತು ಸ್ನಾತಕೋತ್ತರ ಕೋರ್ಸ್‌ಗಳು ನಡೆಯುತ್ತಿದ್ದು 4000ಕ್ಕೂ ಹೆಚ್ಚು ವಿದ್ಯಾರ್ಥಿಗಳಿದ್ದಾರೆ. 250ಕ್ಕೂ ಹೆಚ್ಚು ಅನುಭವಿ ಅಧ್ಯಾಪಕರು, 200ಕ್ಕೂ ಹೆಚ್ಚು ತಾಂತ್ರಿಕ ಮತ್ತು ಆಡಳಿತ ಸಿಬ್ಬಂದಿ ವರ್ಗದವರ ಪರಿಶ್ರಮದಿಂದ ಕಾಲೇಜು ಪುರೋಭಿವೃದ್ಧಿಯಾಗುತ್ತಿದೆ. 150ಕ್ಕೂ ಹೆಚ್ಚು ವಿವಿಧ ಕಂಪನಿಗಳಿಂದ ವರ್ಷಕ್ಕೆ ಸಹಸ್ರಾರು ವಿದ್ಯಾರ್ಥಿಗಳು ಪ್ಲೇಸ್‌ಮೆಂಟ್ ಸೌಲಭ್ಯವನ್ನು ಪಡೆದುಕೊಳ್ಳುತ್ತಿದ್ದಾರೆ. ಹಲವಾರು ಪೇಟೆಂಟ್‌ಗಳನ್ನು ಪಡೆದುಕೊಂಡಿರುವ ಕೀರ್ತಿಯನ್ನು ಪಿ.ಇ.ಟಿ. ಸಂಸ್ಥೆ ದಕ್ಕಿಸಿಕೊಂಡಿದೆ.

### 1500ಕ್ಕೂ ಹೆಚ್ಚು ಮಕ್ಕಳು ಅಭ್ಯಾಸ

1966ರಲ್ಲಿ ಪಿ.ಇ.ಎಸ್ ಪದವಿ ಮತ್ತು ಪದವಿ ಪೂರ್ವ ಕಾಲೇಜು ಆರಂಭವಾಯಿತು. ವಿಜ್ಞಾನ ವಿಭಾಗದಿಂದ ಪ್ರಾರಂಭವಾದ ಪದವಿಪೂರ್ವ ಕಾಲೇಜು ನಂತರದಲ್ಲಿ ಕಲಾ ಮತ್ತು ವಾಣಿಜ್ಯ ನಿಕಾಯಗಳನ್ನು ಆರಂಭಿಸಿ ವಿಸ್ತರಿಸಿಕೊಳ್ಳಲಾಯಿತು. 1500ಕ್ಕೂ ಹೆಚ್ಚು ವಿದ್ಯಾರ್ಥಿಗಳು ವಿದ್ಯಾಭ್ಯಾಸವನ್ನು ನಡೆಸುತ್ತಿದ್ದಾರೆ. 70ಕ್ಕೂ ಮೀರಿ ಅನುಭವಿ ಅಧ್ಯಾಪಕ, ಅಧ್ಯಾಪಕೇತರ ಸಿಬ್ಬಂದಿಯಿಂದ ಕಾಲೇಜು ಉತ್ತಮವಾಗಿ ಸಾಗುತ್ತಿದೆ.

ಪಿ.ಇ.ಎಸ್. ವಿಜ್ಞಾನ, ಕಲಾ ಮತ್ತು ವಾಣಿಜ್ಯ ಕಾಲೇಜಿನಲ್ಲಿ ಪದವಿ ಕೋರ್ಸ್‌ಗಳಾದ ಬಿ.ಎಸ್ಸಿ., ಬಿ.ಎ., ಬಿ.ಕಾಂ., ಬಿ.ಬಿ.ಎ. ಕೋರ್ಸ್‌ಗಳೊಂದಿಗೆ ಗ್ರಾಮೀಣ ಮಕ್ಕಳು ಕಂಪ್ಯೂಟರ್ ಜ್ಞಾನ ಪಡೆದು ಇಂದಿನ ಸ್ಪರ್ಧಾತ್ಮಕ ಪ್ರಪಂಚದಲ್ಲಿ ಸಬಲರಾಗಲು ಬಿ.ಸಿ.ಎ. ಕೋರ್ಸ್ ಅನ್ನು ಪ್ರಾರಂಭಿಸಲಾಯಿತು. ಎಂ.ಕಾಂ. ಮತ್ತು ಗಣಿತಶಾಸ್ತ್ರ ಎಂ.ಎಸ್ಸಿ. ಸ್ನಾತಕೋತ್ತರ ವಿಭಾಗವನ್ನು ಪ್ರಾರಂಭಿಸಲಾಗಿದೆ. ಕಾಲೇಜಿನಲ್ಲಿ 2000ಕ್ಕೂ ಹೆಚ್ಚು ವಿದ್ಯಾರ್ಥಿಗಳು ಅಧ್ಯಯನ ನಡೆಸುತ್ತಿದ್ದು, ಪ್ರತಿವರ್ಷ 10ಕ್ಕೂ ಹೆಚ್ಚು ವಿವಿಧ ಕಂಪನಿಗಳಿಂದ ನೂರಾರು ವಿದ್ಯಾರ್ಥಿಗಳು ಪ್ಲೇಸ್‌ಮೆಂಟ್ ಸೌಲಭ್ಯವನ್ನು ಪಡೆದುಕೊಳ್ಳುತ್ತಿದ್ದಾರೆ. 75ಕ್ಕೂ ಹೆಚ್ಚು ಅನುಭವಿ ಅಧ್ಯಾಪಕರು, 40 ಕ್ಕೂ ಹೆಚ್ಚು ತಾಂತ್ರಿಕ ಮತ್ತು ಆಡಳಿತ ಸಿಬ್ಬಂದಿ ವರ್ಗದವರ ಪರಿಶ್ರಮದಿಂದ ಕಾಲೇಜು ಅಭಿವೃದ್ಧಿಯತ್ತ ಸಾಗುತ್ತಿದೆ. 1969-70ರಲ್ಲಿ ಪಿ.ಯು.ಸಿ. ಮತ್ತು ಬಿ.ಎ. ಪದವಿ ವಿಭಾಗಗಳನ್ನು ಒಳಗೊಂಡ ಪಿ.ಇ.ಎಸ್. ಸಂಜೆ ಕಾಲೇಜು ಪ್ರಾರಂಭವಾಗಿ ಬಡ ವಿದ್ಯಾರ್ಥಿಗಳ ಕಾಮಧೇನುವಾಗಿ ಜೀವನ ಮಾರ್ಗ ಮತ್ತು ಜ್ಞಾನ ಮಾರ್ಗ ಎರಡಕ್ಕೂ ಪೂರಕವಾದ ಕಾಲೇಜು ವಿದ್ಯಾರ್ಥಿಗಳ ಪ್ರವೇಶಾತಿ ಪ್ರಮಾಣ ದಿನದಿಂದ ದಿನಕ್ಕೆ ಕಡಿಮೆಯಾದ ಪರಿಣಾಮ ಪ್ರವೇಶಾತಿ ಇಂದು ಸ್ಥಗಿತವಾಗಿದೆ.

1974ರಲ್ಲಿ ಕೆ.ವಿ.ಶಂಕರಗೌಡ ಶಿಕ್ಷಣ ಮಹಾವಿದ್ಯಾಲಯ ಪ್ರಾರಂಭವಾಯಿತು. ಶ್ರೀಯುತ ಕೆ.ವಿ.ಶಂಕರಗೌಡರ ಜನ್ಮದಿನೋತ್ಸವದಂದು ಅವರ ಅಭಿಮಾನಿ ಬಳಗದವರು ಪ್ರೀತಿಯಿಂದ ಪೂಜನೀಯರಿಗೆ ಅರ್ಪಿಸಿದ ಅರವತ್ತು ಸಾವಿರ ರೂ.ಗಳಿಂದ ಕಾಲೇಜಿನ ಕಟ್ಟಡ ಕಟ್ಟಲ್ಪಟ್ಟಿದ್ದು, ಯಾವುದೇ ಸಾರ್ವತ್ರಿಕ ಕಾರ್ಯಕ್ರಮಗಳಿಂದ ಸದಾ ದೂರ ಸರಿಯುತ್ತಿದ್ದ ರಾಷ್ಟ್ರಕವಿ ಕುವೆಂಪುರವರು ಈ ಕಾಲೇಜಿನ ಶಂಕುಸ್ಥಾಪನೆಯನ್ನು ನೆರವೇರಿಸಿರುವುದು ಹೆಮ್ಮೆಯ ಸಂಗತಿ. ಇದೇ ಸಂದರ್ಭದಲ್ಲಿ ಯಾರನ್ನೂ ಉಪೇಕ್ಷಿಸದ ಕುವೆಂಪು ಅವರು ಕೆ.ವಿ.ಶಂಕರಗೌಡರನ್ನು ನಿತ್ಯಸಚಿವ ಎಂದು ಸಂಬೋಧಿಸಿ ಬಿರುದಾಂಕಿತಗೊಳಿಸಿದರು.

ಅತ್ಯುತ್ತಮ ಕಾನೂನು ಶಿಕ್ಷಣ ನೀಡುವ ಸದುದ್ದೇಶದಿಂದ ಭಾರತ ನೀತಿ ಸಂಹಿತೆಯ ಮಾನ್ಯತೆಯೊಂದಿಗೆ 1986ರಲ್ಲಿ ಪಿ.ಇ.ಎಸ್. ಕಾನೂನು ಕಾಲೇಜನ್ನು ಸಂಸ್ಥೆಯು 5 ವರ್ಷದ ಎಲ್.ಎಲ್.ಬಿ. ಮತ್ತು 3 ವರ್ಷದ ಎಲ್.ಎಲ್.ಬಿ. ತರಗತಿಗಳನ್ನು ಪ್ರಾರಂಭಿಸಲಾಯಿತು. ಇಲ್ಲಿ ವಿದ್ಯಾಭ್ಯಾಸ ನಡೆಸಿದ ಹಲವಾರು ವಿದ್ಯಾರ್ಥಿಗಳು ನ್ಯಾಯಾಧೀಶರಾಗಿ ಹಾಗೂ ನ್ಯಾಯವಾದಿಗಳಾಗಿ ಪ್ರಖ್ಯಾತಿಯಾಗಿದ್ದಾರೆ. ವಿದ್ಯಾರ್ಥಿಗಳು ಜೀವನದ ಸರಿಯಾದ ಮಾರ್ಗದಲ್ಲಿ ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಲು ಅವಕಾಶ ಕಲ್ಪಿಸುವುದರೊಂದಿಗೆ ವಿದ್ಯಾರ್ಥಿಗಳಿಗೆ ಅತ್ಯುತ್ತಮ ಶಿಕ್ಷಣ ದೊರೆಯ ಬೇಕೆಂಬ ಹೆಬ್ಬಯಕೆಯಿಂದ 1989ರಲ್ಲಿ ಪಿ.ಇ.ಎಸ್. ಪ್ರೌಢಶಾಲೆಯನ್ನು ಸಂಸ್ಥೆಯು ಪ್ರಾರಂಭಿಸಿದೆ.

ರಾಜ್ಯದಲ್ಲಿಯೇ ಉತ್ತಮವಾದ ಡಾ.ಎಚ್.ಡಿ.ಚೌಡಯ್ಯ ಕ್ರೀಡಾ ಸಮುಚ್ಚಯವು ನಿರ್ಮಾಣಗೊಂಡಿದ್ದು, ಅತ್ಯುತ್ತಮ ವ್ಯವಸ್ಥಿತ ಒಳ ಕ್ರೀಡಾಂಗಣ ಹಾಗೂ ದೇಹದಾರ್ಢ್ಯ ಕೇಂದ್ರ, ಶೆಟಲ್ ಬ್ಯಾಡ್ಮಿಂಟನ್ ಕೋರ್ಟ್, ವೇಯ್ಟ್ ಲಿಫ್ಟಿಂಗ್, ಕೇರಂ, ಚೆಸ್ ಆಡುವ ಅನುಕೂಲ, ಅಂತಾರಾಷ್ಟ್ರೀಯ ಮಟ್ಟದ ಟೆನ್ನಿಸ್ ಕೋರ್ಟ್ ಮತ್ತು ಈಜುಕೊಳ, ಬಾಸ್ಕೆಟ್ ಬಾಲ್ ಕ್ರೀಡಾಂಗಣ, ಹೊರಾಂಗಣ ಕ್ರೀಡಾಂಗಣ, ರಾಷ್ಟ್ರ ಮತ್ತು ರಾಜ್ಯದಲ್ಲಿ ಪ್ರಖ್ಯಾತಿ ಪಡೆದ ಮೂರು ಹುಲ್ಲುಗಾವಲಿನ ಪಿಚ್‌ಗಳಿಂದ ಕೂಡಿದ ಕ್ರಿಕೆಟ್ ಕ್ರೀಡಾಂಗಣ, ವಾಲಿಬಾಲ್, ಕಬಡ್ಡಿ, ಖೋ ಖೋ ಕ್ರೀಡೆಗಳಿಗೆ ಹಾಗೂ ಇನ್ನೂ ಹಲವು ಕ್ರೀಡೆಗಳಿಗೆ ಪೂರಕವಾಗಿ ಅಂಕಣಗಳನ್ನು ಸೃಷ್ಟಿಸಿ ಹೊನಲು ಬೆಳಕಿನ ವ್ಯವಸ್ಥೆಯನ್ನು ಸಹ ಕಲ್ಪಿಸಿದೆ.

### ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಹುಮಾನ

ಪಿ.ಇ.ಟಿ. ಕ್ರಿಕೆಟ್ ಕ್ರೀಡಾಂಗಣದಲ್ಲಿ ರಣಜಿ ಕ್ರೀಡೆ ನಡೆದಿರುವ ಹೆಗ್ಗಳಿಕೆ ಇದೆ. ಈ ಕ್ರೀಡಾಂಗಣಗಳಲ್ಲಿ ತರಬೇತುಗೊಂಡ ಹಲವು ಕ್ರೀಡಾಪಟುಗಳು ವಿಭಾಗೀಯ, ವಿ.ವಿ. ಮಟ್ಟ, ರಾಜ್ಯ, ರಾಷ್ಟ್ರ ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಹುಮಾನ ಪಡೆದಿರುವುದರ ಜೊತೆಗೆ ಕ್ರೀಡಾ ಮೀಸಲಾತಿಯಡಿ ಉದ್ಯೋಗಸ್ಥರಾಗಲು ಸಾಧ್ಯವಾಗಿದೆ.

ಇಷ್ಟೇ ಅಲ್ಲದೇ ವಿದ್ಯಾರ್ಥಿಗಳಿಗಾಗಿ ಒಕ್ಕಲಿಗರ ಸಾರ್ವಜನಿಕ ವಿದ್ಯಾರ್ಥಿ ಮಂದಿರ, ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳು, ಉದ್ಯೋಗಸ್ಥ ಮಹಿಳೆಯರಿಗಾಗಿ ವಸತಿ ನಿಲಯಗಳನ್ನು ಸ್ಥಾಪಿಸಿ ನಡೆಸಲಾಗುತ್ತಿದೆ. ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಸುವ್ಯವಸ್ಥಿತವಾದ ಸ್ವಾಮಿ ವಿವೇಕಾನಂದ ರಂಗಮಂದಿರ ಹಾಗೂ ನಿತ್ಯಸಚಿವ ಕೆ.ವಿ.ಶಂಕರಗೌಡ ತರಬೇತಿ ಮತ್ತು ಉದ್ಯೋಗ ಕೇಂದ್ರ, ಬೃಹತ್ ಕಾರ್ಯಕ್ರಮಗಳ ಆಯೋಜನೆಗಾಗಿ ಡಾ.ಎಚ್.ಡಿ.ಚೌಡಯ್ಯ ಸಭಾಂಗಣ, ಆಧುನಿಕ ಪ್ರಪಂಚವು ವಿಜ್ಞಾನ ಮತ್ತು ತಂತ್ರಜ್ಞಾನ ಯುಗವೆನಿಸಿದ್ದು ಇದಕ್ಕೆ ಪೂರಕವಾಗಿ ಪಿ.ಇ.ಟಿ. ಕ್ರೀಡಾ ಸಮುಚ್ಚಯದ ಆವರಣದಲ್ಲಿ ವಿಜ್ಞಾನ ಪಾರ್ಕ್ ಅನ್ನು ಸಹ ನಿರ್ಮಿಸಲಾಗಿದೆ.

ಇತರ ಸಂಸ್ಥೆಗಳಿಗೆ ಮಾದರಿಯಾಗಿ ಭವಿಷ್ಯದ ವಿದ್ಯಾರ್ಥಿಗಳಿಗೆ ಉತ್ತಮ ಜ್ಞಾನ ಕೇಂದ್ರವಾಗಿ ಹಾಗೂ ಕ್ರೀಡಾಪಟುಗಳಿಗೆ ತರಬೇತು ಸಂಸ್ಥೆಯಾಗಿ ಜನತಾ ಶಿಕ್ಷಣ ಟ್ರಸ್ಟ್ ನಿತ್ಯ ಸಚಿವ ಕೆ.ವಿ.ಶಂಕರಗೌಡರು ಮತ್ತು ಸಹಕಾರ ರತ್ನ ಡಾ.ಎಚ್.ಡಿ.ಚೌಡಯ್ಯರವರ ಹಾಗೂ ಸಂಗಡಿಗರ ಕನಸಿನಂತೆ ಉತ್ತಮ ಸಾರ್ವಜನಿಕ ಸಂಸ್ಥೆಯಾಗಿ ತನ್ನೆಲ್ಲ ಮೂಲ ಆಶೋತ್ತರಗಳನ್ನು ನೆರವೇರಿಸುವತ್ತ ದಾಪುಗಾಲು ಹಾಕುತ್ತಿದೆ. ಇಂದು ಶ್ರೀ ಕೆ.ಎಸ್. ವಿಜಯ್ ಆನಂದ್ ಮತ್ತು ಪದಾಧಿಕಾರಿಗಳು ಹಾಗೂ ಟ್ರಸ್ಟಿಗಳೊಂದಿಗೆ ಸಂಸ್ಥೆಯ ಔನ್ನತ್ಯದ ಶ್ರೇಯೋಭಿಲಾಷಿಯೊಂದಿಗೆ ಉತ್ಸುಕ ತಂಡವು ಕಾರ್ಯ ಪ್ರವೃತ್ತವಾಗಿದೆ.

# 87ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಹಾರ್ದಿಕ ಶುಭಾಶಯಗಳು

ಶುಭ ಕೋರುವವರು

**ಶ್ರೀ ಮೂಡ್ಲಿಗೌಡ**

ಗ್ಯಾರಂಟಿ ಅನುಷ್ಠಾನ ಸಮಿತಿ ತಾಲ್ಲೂಕು ಅಧ್ಯಕ್ಷರು
ಹಾಗೂ ಮಾಜಿ ತಾಲ್ಲೂಕು ಪಂಚಾಯಿತಿ ಅಧ್ಯಕ್ಷರು
ತಾವರೆಕೆರೆ, ನಾಗಮಂಗಲ, ಮಂಡ್ಯ ಜಿಲ್ಲೆ

ಶುಭ ಕೋರುವವರು:
ಗ್ಯಾರಂಟಿ ಅನುಷ್ಠಾನ
ಸಮಿತಿಯ ಸದಸ್ಯರುಗಳು

---

# 87ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಶುಭಾಶಯಗಳು

ಶುಭ ಕೋರುವವರು

## ಮಾಯಿಗೋನಹಳ್ಳಿ ಗ್ರಾಮ ಪಂಚಾಯತಿ

ನಾಗಮಂಗಲ, ಮಂಡ್ಯ ಜಿಲ್ಲೆ.

ಎನ್.ಎಲ್.ಸುನಿಲ್‌ಗೌಡ, ಪಿ.ನೇರಲಕೆರೆ, ಅಧ್ಯಕ್ಷರು

ಸಣ್ಣತಾಯಮ್ಮ, ನರಗಲು, ಉಪಾಧ್ಯಕ್ಷರು

ಪಿ.ಹೆಚ್.ಪುಟ್ಟರಾಜು, ಪಡುವಲಪಟ್ಟಣ

ನಾಗೇಶ್, ಪಿ.ನೇರಲಕೆರೆ

ನಾಗರಾಜು, ಮಾಯಿಗೋನಹಳ್ಳಿ

ಪುಷ್ಪಲತಾ, ಹೂವಿನಹಳ್ಳಿ

ಎನ್.ಜೆ.ಲೋಕೇಶ್, ನರಗಲು

ನೀಲಾಮಣಿ, ಶಿವನಹಳ್ಳಿ

ಹೇಮಲತಾ, ಪಿ.ಮಲ್ಲೇನಹಳ್ಳಿ (ಪಿ.ನೇರಲಕೆರೆ)

ಶಾಂತಮ್ಮ, ಪಡುವಲಪಟ್ಟಣ

ಗೀತಾ, ಗಂಗರಹಳ್ಳಿ

ಶಾಂತರಾಜು, ಶಿವನಹಳ್ಳಿ

ಸುರೇಶ್, ಪಿಡಿಓ

ಬಿ.ಕೆ.ಬೋರೇಗೌಡ, ಕಾರ್ಯದರ್ಶಿ

ಕೆ.ಆರ್.ವೇಣು, ಅಕೌಂಟೆಟ್

ಶುಭಾಶಯ ಕೋರುವವರು

ಗ್ರಾಮ ಪಂಚಾಯತಿ ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಸರ್ವ ಸದಸ್ಯರುಗಳು ಹಾಗೂ ಸಿಬ್ಬಂದಿ ವರ್ಗ







ಎಂಬಿಬಿಎಸ್ ಪದವಿ ಪಡೆದು ವೈದ್ಯರಾಗಿದ್ದ ಡಾ.ಬೆಸಗರಹಳ್ಳಿ ರಾಮಣ್ಣ



# ಕಥೆಗಾರರಾಗಿ ಅರಳಿದ ಡಾ.ಬೆಸಗರಹಳ್ಳಿ ರಾಮಣ್ಣ

■ ಯೋಗೀಶ್ ತೀರ್ಥಪುರ

ಗ್ರಾಮೀಣ ಪ್ರದೇಶದಲ್ಲಿ ಬೆಳೆದ ಮಕ್ಕಳು ತಮ್ಮ ಅಜ್ಜಿಯಿಂದ ಒಂದಲ್ಲ ಒಂದು ಸಲವಾದರೂ ಕಥೆಯನ್ನು ಕೇಳದೆ ಇರಲಾರರು. ಮಕ್ಕಳು ಊಟತಿಂಡಿ, ನಿದ್ದೆಯನ್ನು ಬಿಟ್ಟು ಕೈಕಟ್ಟಿ ಕಣ್ಣರಳಿಸಿಕೊಂಡು ಅಜ್ಜಿ ಹೇಳುವ ಕಥೆಯನ್ನು ಆಲಿಸುತ್ತಾರೆ. ರಾತ್ರಿಯ ಹೊತ್ತು ಅಜ್ಜಿ ಹೇಳುವ ಕಥೆಗಳು ಮಕ್ಕಳಲ್ಲಿ ಕುತೂಹಲ, ಜ್ಞಾಪಕಶಕ್ತಿಯ ಜೊತೆಗೆ ಕಲ್ಪನಾಶಕ್ತಿಯನ್ನೂ ಮೂಡಿಸುತ್ತವೆ. ಹೀಗಾಗಿ, ಬಾಲ್ಯದಲ್ಲಿ ಅಜ್ಜಿಯಿಂದ ಕೇಳಿದ ಕಥೆಗಳ ಸ್ಫೂರ್ತಿಯಿಂದ ಕನ್ನಡ ಕಥೆಗಾರರಾಗಿ ಡಾ.ಬೆಸಗರಹಳ್ಳಿ ರಾಮಣ್ಣ ಅರಳಿದರು.

ಬರಹ ಎಂಬ ಚುಂಬಕಶಕ್ತಿ ಎಂಥವರನ್ನೂ ಸಮ್ಮೋಹಿತಗೊಳಿಸುತ್ತದೆ. ಆದರೆ, ಅದು ನಿರಂತರ ಓದುವ, ಕೇಳುವ ಮತ್ತು ಜೀವನದಲ್ಲಿ ಅನುಭವಿಸಿರುವ ವಿಭಿನ್ನ ಸಂಗತಿಗಳನ್ನು ಸೂಕ್ಷ್ಮವಾಗಿ ನೋಡುವುದರಿಂದ ಮಾತ್ರ ಸಾಧ್ಯ. ಗ್ರಾಮೀಣ ಜನರ ಕಲ್ಪನೆ, ಭಾವನೆ, ಬದುಕನ್ನೇ ಕೇಂದ್ರವಾಗಿಟ್ಟುಕೊಂಡು ಕಥೆಯನ್ನು ಸೃಷ್ಟಿಸಿ, ಓದುಗರನ್ನು ಆಕರ್ಷಿಸಿದವರಲ್ಲಿ ಡಾ.ಬೆಸಗರಹಳ್ಳಿ ರಾಮಣ್ಣ ಪ್ರಮುಖರಾಗಿದ್ದಾರೆ. ಇವರ ತಂದೆಯ ಸೋದರ ಮಾವನ ಹೆಂಡತಿ ದೇಸಳ್ಳಿ ಅಮ್ಮ ಹೇಳುತ್ತಿದ್ದ ಲೆಕ್ಕವಿಲ್ಲದಷ್ಟು ಕಥೆ, ಇಂಗ್ಲಿಷ್ ಎಂಎ ಮಾಡಿದ್ದ ಸೋದರಮಾವ ಮತ್ತು ಅಣ್ಣ ಪುಟ್ಟಸ್ವಾಮಿ ಅವರಲ್ಲಿದ್ದ ಸಾಹಿತ್ಯ ಪ್ರೀತಿಯು ರಾಮಣ್ಣ ಅವನ್ನು ಕನ್ನಡ ಸಾಹಿತ್ಯ ಸೆಳೆಯಿತು.

ಇವರು ಮಂಡ್ಯ ಜಿಲ್ಲೆಯ ಮದ್ದೂರು ತಾಲೂಕಿನ ಬೆಸಗರಹಳ್ಳಿಯ ಚಿಕ್ಕ ಎಲ್ಲೇಗೌಡ ಹಾಗೂ ದೊಡ್ಡ ತಾಯಮ್ಮ ಪುತ್ರರಾಗಿ 1938 ಆಗಸ್ಟ್ 15 ಜನಿಸಿದರು. ತಂದೆ ಕೃಷಿಕರಾಗಿದ್ದರಿಂದ ಪ್ರಾರಂಭಿಕ ಶಿಕ್ಷಣ ಬೆಸಗರಹಳ್ಳಿ ಮತ್ತು ಮದ್ದೂರಿನಲ್ಲಿ ಪಡೆದ ನಂತರ, ಮೈಸೂರಿನ ಯುವರಾಜ ಕಾಲೇಜಿಗೆ (1957-58) ಸೇರಿದಾಗ ಮನೆಯಲ್ಲಿ ಭಿತ್ತಿದ್ದ ಸಾಹಿತ್ಯ ಎಂಬ ಬೀಜ ಹೆಮ್ಮರವಾಗಿ ಬೆಳೆಯಲು ಆರಂಭವಾಯಿತು.

## ಆಪ್ತವಾದ ಸಾಹಿತ್ಯ

ಯುವರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದ ಜಿ.ಎಸ್.ಶಿವರುದ್ರಪ್ಪ ಅವರ ಸಾಹಿತ್ಯ ಬೋಧನೆ ಮತ್ತು ಮಹಾರಾಜ ಕಾಲೇಜಿನ ಕರ್ನಾಟಕ ಸಂಘವು ನಡೆಸುತ್ತಿದ್ದ 'ಸಾಹಿತ್ಯ ಸಂಜೆ' ಕಾರ್ಯಕ್ರಮಗಳಲ್ಲಿ ಕನ್ನಡದ ಪ್ರಸಿದ್ಧ ವಿದ್ವಾಂಸರಾದ ಡಿ.ಎಲ್ .ನರಸಿಂಹಾಚಾರ್ ಮತ್ತು ತೀ.ನಂ.ಶ್ರೀಕಂಠಯ್ಯ ಸೇರಿದಂತೆ ಪ್ರಸಿದ್ಧ ಲೇಖಕರು ಮಾಡುತ್ತಿದ್ದ ವಿವಿಧ ವಿಚಾರಗಳ ಭಾಷಣಗಳು ರಾಮಣ್ಣರನ್ನು ಇನ್ನೂ ಹೆಚ್ಚು ಕನ್ನಡ ಸಾಹಿತ್ಯದ ಕಡೆ ಸೆಳೆದು ಆಪ್ತವಾಯಿತು. ಸಾಹಿತ್ಯದ ಒಡನಾಟ ಹೆಚ್ಚಾಗುತ್ತಿರುವಾಗಲೇ ಸೀನಿಯರ್ ಇಂಟರ್ ಮೀಡಿಯೆಟ್ ಉತ್ತೀರ್ಣರಾಗಿ, ಮನೆಯವರ ಒತ್ತಡಕ್ಕಾಗಿ ಮೈಸೂರು ಮೆಡಿಕಲ್ ಕಾಲೇಜಿಗೆ ಸೇರಿದರೂ ಸಹ, ಸಾಹಿತ್ಯದ ಆಸಕ್ತಿ ಕಡಿಮೆಯಾಗದೆ, ಕನ್ನಡ ಮತ್ತು ಇಂಗ್ಲಿಷ್‌ನ ಪ್ರಸಿದ್ಧ ಲೇಖಕರ ಕೃತಿಗಳನ್ನು ಗಂಭೀರವಾಗಿ ಅಧ್ಯಯನ ಮಾಡುತ್ತಾ, ಸಾಹಿತ್ಯದ ಮೇಲಿನ ಪ್ರೀತಿ ಬೆಳೆಯುತ್ತಲೇ ಇತ್ತು. ವೈದ್ಯಕೀಯದ ಪುಸ್ತಕಗಳಿಗಿಂತ ಹೆಚ್ಚು ಸಾಹಿತ್ಯದ ಪುಸ್ತಕಗಳನ್ನು ಸಂಗ್ರಹಿಸಿ, ಓದುತ್ತಿದ್ದರು.

## ಮೆಚ್ಚುಗೆ ಪಡೆದ ಕಥೆ

ಪ್ರಜಾವಾಣಿ ದೀಪಾವಳಿ ಕಥಾ ಸ್ಪರ್ಧೆಗಾಗಿ ರಾಮಣ್ಣ ಬರೆದ 'ಹಾವಿಲ್ಲದ ಹುತ್ತ' ಕಥೆಯು ವಿದ್ಯಾರ್ಥಿ ವಿಭಾಗದಲ್ಲಿ ತೀರ್ಪುಗಾರರ ಮೆಚ್ಚುಗೆಗೆ ಪಾತ್ರವಾಗಿತ್ತು. ಇದರಿಂದ ತಮ್ಮ ಬರವಣಿಗೆಯ ಮೇಲೆ ಆತ್ಮವಿಶ್ವಾಸ ಹೆಚ್ಚಾಯಿತು. ಇವರು ಬರೆದ ಕಥೆಗಳು 'ಲೋಕಾಪಾವನಿ', 'ಸುಧಾ' ಪತ್ರಿಕೆಗಳಲ್ಲಿ ಪ್ರಕಟವಾಗತೊಡಗಿದವು. ವೈದ್ಯಕೀಯ ವಿದ್ಯಾರ್ಥಿಯಾಗಿದ್ದರೂ ಮಿತ್ರರೊಂದಿಗೆ ಸಾಹಿತ್ಯದ ಬಗ್ಗೆ ಚರ್ಚಿಸುತ್ತಿದ್ದರು. ಇದರ ಫಲವಾಗಿ 2ನೇ ಬಾರಿಗೆ ದೀಪಾವಳಿ ಕಥಾ ಸ್ಪರ್ಧೆಗಾಗಿ ಬರೆದ 'ಸುಗ್ಗಿ' ಕಥೆ ಪ್ರಥಮ ಬಹುಮಾನ ಪಡೆಯಿತು. ಇಲ್ಲಿಂದ ವ್ಯಾಪಕವಾಗಿ ಕಥೆಗಳು ಅರಳತೊಡಗಿದವು.

## ವೈದ್ಯರಾಗಿ ಕಾರ್ಯನಿರ್ವಹಣೆ

ಎಂಬಿಬಿಎಸ್ ಪದವಿ ಪಡೆದ ರಾಮಣ್ಣನಿಗೆ ವಿದೇಶದಲ್ಲಿ ಉದ್ಯೋಗಕ್ಕೆ ಅವಕಾಶವಿದ್ದರೂ, ಅದನ್ನು ನಿರಾಕರಿಸಿ ಗ್ರಾಮೀಣ ಪ್ರದೇಶದಲ್ಲಿ ವೈದ್ಯರಾಗಿ ಕಾರ್ಯನಿರ್ವಹಿಸಿದರು. ನಂತರ ಸರ್ಕಾರಿ ವೈದ್ಯರಾಗಿ ನೇಮಕಗೊಂಡು ಬೆಳ್ಳೂರು, ಮೇಲುಕೋಟೆ, ಶ್ರೀರಂಗಪಟ್ಟಣ, ಹಳೇಬೀಡು ಮುಂತಾದ ಆರೋಗ್ಯ ಕೇಂದ್ರಗಳು ಮತ್ತು ಮಂಡ್ಯ ಸರ್ಕಾರಿ ಆಸ್ಪತ್ರೆಯಲ್ಲಿ ವೈದ್ಯಾಧಿಕಾರಿಯಾಗಿ ಸೇವೆಸಲ್ಲಿಸಿದರು. ವೃತ್ತಿಯಲ್ಲಿ ವೈದ್ಯರಾಗಿದ್ದರೂ, ಪ್ರವೃತ್ತಿಯಿಂದ ಅಪರೂಪದ ಕಥೆಗಾರರಾಗಿ ನಾಡಿನಲ್ಲಿ ಪರಿಚಿತರಾಗಿದ್ದರು.

## ರಾಮಣ್ಣನ ಕೃತಿಗಳು

ಕಥಾ ಸಂಕಲನವಾದ ನೆಲದ ಒಡಲು (1967), ಗರ್ಜನೆ (1972), ನೆಲದ ಸಿರಿ (1975), ಹರಕೆಯ ಹಣ (1976), ಒಂದು ಹುಡುಗನಿಗೆ ಬಿದ್ದ ಕನಸು (1979), ಕನ್ನಂಬಾಡಿ (1986), ಸುಗ್ಗಿ (1991), ಕೊಳಲು ಮತ್ತು ಖಡ್ಗ, ಕವನ ಸಂಕಲನವಾದ ಶೋಕಚಕ್ರ (1990), ಕಾದಂಬರಿಯಾದ ರಕ್ತ ಕಣ್ಣೀರು, ತೋಳಗಳ ನಡುವೆ (1974) ಎಂಬ ಕೃತಿಗಳನ್ನು ರಚಿಸಿದರು. ಕನ್ನಡ ಸಾಹಿತ್ಯ ಲೋಕವನ್ನು ಶ್ರೀಮಂತ ಗೊಳಿಸಿದ ರಾಮಣ್ಣ ಅವರ 'ನೆಲದ ಒಡಲು' ಕಥಾ ಸಂಕಲನಕ್ಕೆ 1967ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ, 'ಗರ್ಜನೆ' ಕಥಾ ಸಂಕಲನಕ್ಕೆ 1972ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಸಿಕ್ಕಿದೆ. ಅಪರೂಪದ ವ್ಯಕ್ತಿತ್ವ ಹೊಂದಿದ್ದ ಡಾ.ಬೆಸಗರಹಳ್ಳಿ ರಾಮಣ್ಣ ಅವರು 1998 ಜುಲೈ 13ರಂದು ಇಹಲೋಕ ತ್ಯಜಿಸಿದರು. ◆




## ಕಥೆಯಲ್ಲಿ ಬದುಕಿನ ಚಿತ್ರಣ

ಕನ್ನಡ ಓದು-ಗರ ಮನಸ್ಸನ್ನು ಗೆದ್ದ ರಾಮಣ್ಣ ಅವರ ಜನಪ್ರಿಯ ಕಥೆಗಳು ಪಿಯುಸಿಯಿಂದ ಪದವಿ ತರಗತಿವರೆಗೂ ಪಠ್ಯಕ್ರಮಗಳಾಗಿವೆ. ಅಲ್ಲದೆ, ಇಂಗ್ಲಿಷ್, ಮಲೆಯಾಳಂ ಸೇರಿದಂತೆ ಹಲವು ಭಾಷೆಗಳಿಗೆ ಅವರ ಕಥೆಗಳು ಅನುವಾದ ಗೊಂಡಿವೆ. ರಾಮಣ್ಣ ಅವರು ಮಂಡ್ಯ, ಮದ್ದೂರು, ಬೆಸಗರಹಳ್ಳಿ ಪರಿಸರದ ವಿಶಿಷ್ಟ ಭಾಷೆ ಹಾಗೂ ಅನುಭವಗಳ ಮೂಲಕ ತಮ್ಮ ಕಥೆಗಳನ್ನು ರಚಿಸಿದ್ದಾರೆ. ಸಾಮಾನ್ಯ ಜನತೆಯ ದೈನಂದಿನ ಬದುಕಿನ ಚಿತ್ರಣವನ್ನು ಇವರ ಕಥೆಗಳಲ್ಲಿ ಕಾಣಬಹುದು. ಕಥೆಗಾರ ಡಾ.ಬೆಸಗರಹಳ್ಳಿ ರಾಮಣ್ಣ ಅವರಿಗೆ ಸಾಹಿತ್ಯದ ಬಗ್ಗೆ ಅಪಾರ ಗೌರವ, ಪ್ರೀತಿ ಇತ್ತು. ಹೀಗಾಗಿ ಒಂದೆಡೆ, 'ಸಾಹಿತ್ಯದ ಓದು ಮನುಷ್ಯನಲ್ಲಿಯ ಮೃಗೀಯತೆಯನ್ನು ಕಳೆದು ಮನುಷ್ಯನನ್ನಾಗಿ ಮಾಡುತ್ತದೆ. ಮತ್ತು ನನ್ನಲ್ಲಿ ಪ್ರಾಮಾಣಿಕತೆ ಏನಾದರೂ ಇದ್ದಿದ್ದೇ ಆದರೆ ಅದು ಸಾಹಿತ್ಯದ ಓದಿನಿಂದ ಬಂದಿದ್ದು, ಅದು ನನ್ನನ್ನು ಮನುಷ್ಯನನ್ನಾಗಿ ಮಾಡಿ, ಈ ನೆಲದಲ್ಲಿ ಬದುಕಲು ಅವಕಾಶ ಮಾಡಿಕೊಟ್ಟಿದೆ' ಎಂದು ತಿಳಿಸಿದ್ದಾರೆ.

# ನೋಡಬನ್ನಿ ಚೆಲುವ ನಾರಾಯಣನ ವೈಭವ

ಪಾರಂಪರಿಕ, ಧಾರ್ಮಿಕ, ಐತಿಹಾಸಿಕ ಹಿನ್ನೆಲೆಯ ಮೇಲುಕೋಟೆ





■ ಕುಮಾರಸ್ವಾಮಿ ಹರಳಹಳ್ಳಿ

ಕಾವೇರಿ ಕಣಿವೆಯ ಯದುಗಿರಿ ಬೆಟ್ಟದಲ್ಲಿರುವ ಮೇಲುಕೋಟೆಯೂ ದೇಶದ ಹಲವು ಪ್ರಸಿದ್ಧ ಪ್ರವಾಸಿ ತಾಣಗಳ ಪಟ್ಟಿಗೆ ಸೇರಿದ್ದು, ಮಂಡ್ಯ ಜಿಲ್ಲೆಯ ಪ್ರಮುಖ ಪ್ರಸಿದ್ಧ ತಾಣಗಳಲ್ಲಿ ಪ್ರಮುಖವಾಗಿದೆ. ಪಾರಂಪರಿಕ, ಧಾರ್ಮಿಕ ಹಾಗೂ ಐತಿಹಾಸಿಕ ಹಿನ್ನೆಲೆ ಹೊಂದಿರುವ ಮೇಲುಕೋಟೆಯಲ್ಲಿ ಶ್ರೀ ಚೆಲುವನಾರಾಯಣ ಹಾಗೂ ಶ್ರೀಯೋಗನರಸಿಂಹಸ್ವಾಮಿ ದೇವರುಗಳು ನೆಲೆಸಿದ್ದಾರೆ.

ಪಾಂಡವಪುರ ತಾಲೂಕಿನಲ್ಲಿರುವ ಮೇಲುಕೋಟೆಯನ್ನು ಯದುಗಿರಿ, ಯಾದವಗಿರಿ ಹಾಗೂ ಯದುಶೈಲ ಎಂಬ ಹಲವು ಹೆಸರುಗಳಿಂದಲೂ ಕರೆಯಲ್ಪಡುತ್ತದೆ. ಮೇಲುಕೋಟೆಯನ್ನು ಭೂ ವೈಕುಂಠವರ್ಧನ ಕ್ಷೇತ್ರವೆಂದು ಕರೆಯುವುದು ವಿಶೇಷ. ಕೋಟೆ ಕೊತ್ತಲಗಳು, ಗುಡಿ-ಮಂಪಟಗಳು, ಕಲ್ಯಾಣಿಗಳಿಂದ ಕೂಡಿರುವ ಮೇಲುಕೋಟೆ ಪ್ರವಾಸಿಗರ ನೆಚ್ಚಿನ ತಾಣ. ಇಲ್ಲಿ ಪಂಚಕಲ್ಯಾಣಿ, ಅಕ್ಕತಂಗಿಯರ ಕೊಳ, ರಾಯಗೋಪುರ, ಧನುಷ್ಕೋಟಿ ಸೇರಿದಂತೆ ಹಲವು ಸ್ಮಾರಕಗಳನ್ನು ಹೊಂದಿದೆ.

ಮೇಲುಕೋಟೆಯಲ್ಲಿ 108ಕ್ಕೂ ಹೆಚ್ಚು ಕಲ್ಯಾಣಿ ಕೊಳಗಳಿದ್ದು, ಅವುಗಳಲ್ಲಿ ಕೆಲವು ಮುಚ್ಚಿಹೋಗಿದ್ದು, 70-80 ಕಲ್ಯಾಣಿಗಳನ್ನು ಮಾತ್ರ ಕಾಣಬಹುದಾಗಿದೆ. ಇಂದಿಗೂ ಹಲವು ಕಲ್ಯಾಣಿಗಳಲ್ಲಿ ಬೇಸಿಗೆಕಾಲದಲ್ಲೂ ವರ್ಷವಿಡೀ ನೀರು ತುಂಬಿರುವುದು ಇಲ್ಲಿನ ವಿಶೇಷವಾಗಿದೆ. ಮೇಲುಕೋಟೆಯು ಹೊಯ್ಸಳರ ರಾಜ ವಿಷ್ಣುವರ್ಧನ ಆಳ್ವಿಕೆಯಿಂದ ಮೈಸೂರು ಅರಸರ ಆಳ್ವಿಕೆಯವರೆಗೂ ರಾಜಾಶ್ರಯ ಪಡೆದುಕೊಂಡಿದೆ. 12ನೇ ಶತಮಾನದಲ್ಲಿ ವೈಷ್ಣವ ಸಂತ ಶ್ರೀರಾಮಾನುಜಾಚಾರ್ಯರು ಇಲ್ಲಿಗೆ ಬಂದು 14 ವರ್ಷಗಳ ಕಾಲ ನೆಲೆಸಿ ಇಲ್ಲಿರುವ ಶ್ರೀಯೋಗನರಸಿಂಹಸ್ವಾಮಿ, ಶ್ರೀ ಚೆಲುವ ನಾರಾಯಣಸ್ವಾಮಿ, ಕಲ್ಯಾಣಿಗಳು, ರಾಜಗೋಪುರ ಜೀರ್ಣೋದ್ಧಾರಗೊಳಿಸಿದ ಕೀರ್ತಿ ವೈಷ್ಣವ ಸಂತ ಶ್ರೀರಾಮಾನುಜಾಚಾರ್ಯರಿಗೆ ಸಲ್ಲುತ್ತದೆ. ಮೈಸೂರು ಅರಸರು ಇಲ್ಲಿನ ಶ್ರೀಚೆಲುವನಾರಾಯಣ ಸ್ವಾಮಿ ದೇವರಿಗೆ ರಾಜಮುಡಿ, ವೈರಮುಡಿ ಹಾಗೂ ಕೃಷ್ಣರಾಜ ಮುಡಿ ವಜ್ರಖಚಿತ ಕಿರೀಟಗಳನ್ನು ಉಡುಗೊರೆಯಾಗಿ ನೀಡಿದ್ದಾರೆ. ಇಲ್ಲಿ ಪ್ರತಿವರ್ಷವೂ ವಿಶ್ವವಿಖ್ಯಾತ ವೈರಮುಡಿ, ರಾಜಮುಡಿ, ಕೃಷ್ಣರಾಜಮುಡಿ ಉತ್ಸವ ನಡೆಯಲಿದೆ.

## ಮೇಲುಕೋಟೆ ಅಭಿವೃದ್ಧಿಗೆ ಸರ್ಕಾರ ಮುಂದಾಗಲಿ

ಮೇಲುಕೋಟೆಯಲ್ಲಿರುವ ಬಹುತೇಕ ಮಂಟಪಗಳು, ಕೋಟೆ ಕೊತ್ತಲಗಳು ಶಿಥಿಲಗೊಂಡಿದ್ದು, ಮೈಸೂರಿನ ಖ್ಯಾತ ಉದ್ಯಮಿ ಇನ್ಫೋಸಿಸ್ ಮುಖ್ಯಸ್ಥೆ ಸುಧಾಮೂರ್ತಿ ಅವರು ಕಲ್ಯಾಣಿಕೊಳ ಸೇರಿದಂತೆ ಅನೇಕ ಸ್ಮಾರಕಗಳನ್ನು ಜೀರ್ಣೋದ್ಧಾರಗೊಳಿಸಿದರು. ಜತೆಗೆ ದೇವಸ್ಥಾನಕ್ಕೆ ಸೇರಿದ ಹಲವು ಪ್ರದೇಶಗಳು ಒತ್ತವರಿಯಾಗಿದ್ದು ಪಾರಂಪರಿಕ, ಐತಿಹಾಸಿಕ ಇತಿಹಾಸವನ್ನು ಹೊಂದಿರುವ ಮೇಲುಕೋಟೆಯ ಅಭಿವೃದ್ಧಿಗೆ ಸರ್ಕಾರ ಮತ್ತಷ್ಟು ವಿಶೇಷ ಅನುದಾನ ನೀಡಲು ಮುಂದಾಗಬೇಕಿದೆ.

## ಹಲವು ಸಿನಿಮಾಗಳ ಚಿತ್ರೀಕರಣ

ಬೆಟ್ಟದ ಮೇಲಿರುವ ಯೋಗನರಸಿಂಹಸ್ವಾಮಿ ದೇವಸ್ಥಾನ, ಕಲ್ಯಾಣಿಕೊಳ, ಅಕ್ಕ-ತಂಗಿಯರ ಕೊಳ, ಧನುಷ್ಕೋಟಿ ಹಾಗೂ ಇಲ್ಲಿನ ಬೆಟ್ಟದ ಸೌಂದರ್ಯ ಪ್ರವಾಸಿಗರನ್ನು ಆಕರ್ಷಿಸುತ್ತದೆ. ಇಲ್ಲಿ ಕನ್ನಡ, ತಮಿಳು, ತೆಲುಗು ಹಾಗೂ ಹಿಂದಿ ಸೇರಿದಂತೆ ಹಲವಾರು ಚಲನಚಿತ್ರಗಳ ಚಿತ್ರೀಕರಣವೂ ನಡೆಯುತ್ತಿರುತ್ತವೆ. ಪಾಂಡವಪುರ, ಮಂಡ್ಯ, ನಾಗಮಂಗಲ, ಕೆ.ಆರ್.ಪೇಟೆ ಹಾಗೂ ಶ್ರವಣಬೆಳಗೊಳ ಕಡೆಯಿಂದಲೂ ಮೇಲುಕೋಟೆಗೆ ಬರಲು ರಸ್ತೆ ಸಂಪರ್ಕವಿದೆ. ◆



**ಮದ್ದೂರಮ್ಮ ಹಲವು ಭಕ್ತರ ಕೋರಿಕೆ ಈಡೇರಿಸೋ ಶಕ್ತಿದೇವತೆಯಾಗಿ ನೆಲೆ ನಿಂತಿದ್ದಾಳೆ. ಸಾವಿರಾರು ಭಕ್ತ ಸಮೂಹವನ್ನು ಹೊಂದಿರುವ ತಾಯಿ ಮದ್ದೂರಮ್ಮನಿಗೆ ನೆರೆಯ ರಾಜ್ಯಗಳಾದ ತ.ನಾಡು, ಕೇರಳದಲ್ಲೂ ಭಕ್ತಗಣವಿದೆ. ಪ್ರತಿ ವರ್ಷ ನಡೆಯುವ ಕೊಂಡೋತ್ಸವದಲ್ಲಿ ಭಕ್ತರು ಕೊಂಡ ಹಾಯ್ದು ತಮ್ಮ ಹರಕೆ ತೀರಿಸುವುದು ವಾಡಿಕೆ. ಅಗ್ನಿವಂಶ ತಿಗಳ ಕುಲದ ಅರ್ಚಕರು ಕೊಂಡ ಪ್ರವೇಶಿಸುವ ವೇಳೆ ಭಕ್ತರ ಹರ್ಷೋದ್ಗಾರ ಮುಗಿಲು ಮುಟ್ಟಿರುತ್ತದೆ.**






# ಭಕ್ತರ ಹರಸೋ ಶಕ್ತಿದೇವತೆ ಮದ್ದೂರಮ್ಮ ತಾಯಿ

■ ಎಸ್.ಪುಟ್ಟಸ್ವಾಮಿ,
ಎಚ್.ಕೆ.ವಿ ನಗರ,
ಮದ್ದೂರು

ಐತಿಹಾಸಿಕ ಹಿನ್ನಲೆಯುಳ್ಳ ಶ್ರೀ ಮದ್ದೂರಮ್ಮ ಮಂಡ್ಯ ಜಿಲ್ಲೆ ಸೇರಿದಂತೆ ರಾಜ್ಯದ ವಿವಿಧೆಡೆ ಸಹಸ್ರಾರು ಭಕ್ತರ ಆರಾಧ್ಯ ದೈವವಾಗಿದ್ದು, ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುವ ಮೂಲಕ ಈ ಭಾಗದ ಶಕ್ತಿದೇವತೆಯಾಗಿ ನೆಲೆಯೂರಿ ನಿಂತಿದ್ದಾಳೆ.

ಸಾವಿರಾರು ಭಕ್ತ ಸಮೂಹವನ್ನು ಹೊಂದಿರುವ ತಾಯಿ ಮದ್ದೂರಮ್ಮ ನೆರೆಯ ರಾಜ್ಯಗಳಾದ ತಮಿಳುನಾಡು, ಕೇರಳ ಹಾಗೂ ಮೈಸೂರು, ಮಂಡ್ಯ, ಬೆಂಗಳೂರು, ರಾಮನಗರ ಇನ್ನಿತರ ಜಿಲ್ಲೆಗಳಿಂದ ಆಗಮಿಸುವ ಭಕ್ತರು ವಿಶೇಷ ಪೂಜಾ ಕಾರ್ಯಕ್ರಮಗಳನ್ನು ನೆರವೇರಿಸಿ ಇಷ್ಟಾರ್ಥಗಳನ್ನು ಈಡೇರಿಸಿಕೊಂಡಿರುವ ಸಾಕಷ್ಟು ಉದಾಹರಣೆಗಳಿವೆ.

ವರ್ಷಂಪ್ರತಿ ನಡೆಯುವ ಶ್ರೀ ಮದ್ದೂರಮ್ಮನವರ ಜಾತ್ರೆ ಹಾಗೂ ಕೊಂಡೋತ್ಸವದ ಅಂಗವಾಗಿ ಒಂದು ವಾರಗಳ ಕಾಲ ವಿವಿಧ ಪೂಜಾ ಕಾರ್ಯಕ್ರಮಗಳು ನೆರವೇರಲಿವೆ. ಅಗ್ನಿವಂಶ ತಿಗಳ ಕುಲದ ಅರ್ಚಕರು ಕೊಂಡ ಪ್ರವೇಶಿಸುವ ಮೂಲಕ ಭಕ್ತರ ಹರ್ಷೋದ್ಗಾರಕ್ಕೆ ಕಾರಣವಾಗುತ್ತಾರೆ.

**ಕೊಂಡೋತ್ಸವ ಅಂಗವಾಗಿ ವಾರಗಳ ಕಾಲ ನಡೆಯುವ ಧಾರ್ಮಿಕ ಕಾರ್ಯಕ್ರಮ**



**ತಮಿಳುನಾಡು, ಕೇರಳ ರಾಜ್ಯದ ಭಕ್ತರೂ ಭಾಗಿ**

ಜಾತ್ರಾ ಸಮಯದಲ್ಲಿ ಸಂಧಾನ ಸೇವೆ, ತೀರ್ಥಸ್ನಾನ ಉತ್ಸವ, ಶ್ರೀ ಎಲ್ಲಮ್ಮ ದೇವಿಯವರಿಗೆ ಚಂದ್ರಭಂಡಾರ ಸೇವೆ, ಕೊಂಡಬಂಡಿ ಉತ್ಸವ ಇನ್ನಿತರ ಪೂಜಾ ಕೈಂಕರ್ಯಗಳು ನೆರವೇರಿದ ಬಳಿಕ ತಡರಾತ್ರಿ ಶಿಂಷಾ ನದಿಯಿಂದ ಹೂ-ಹೊಂಬಾಳೆ ಸಮೇತ ಸಪ್ತ ಮಾತೃಕೆಯರೊಡನೆ ಹೊರಡುವ ಶ್ರೀ ಮದ್ದೂರಮ್ಮನವರ ಪೂಜಾ ಮೆರವಣಿಗೆ ಪಟ್ಟಣದ ಹೊಳೆಬೀದಿ, ಹಳೇ ಒಕ್ಕಲಿಗರ ಬೀದಿ ಮೂಲಕ ತೆರಳಿ ಮಠಮನೆ ತಲುಪಲಿದೆ. ಮುಂಜಾನೆ ಸೂರ್ಯೋದಯ ಬಳಿಕ ಮದ್ದೂರಮ್ಮನವರ ಮಠಮನೆಯಿಂದ ಹೆಬ್ಬಾರೆ ಸಮೇತ ಹೊರಡುವ ಶ್ರೀ ಮದ್ದೂರಮ್ಮನವರ ಪೂಜಾ ಉತ್ಸವದ ಅಗ್ನಿ ಕೊಂಡ ಪ್ರವೇಶ ಪ್ರತಿವರ್ಷ ಜರುಗಲಿದೆ.

## ವಿಜೃಂಭಣೆಯ ಸಿಡಿ ಉತ್ಸವ

ದೇವಾಲಯದ ಆವರಣದಲ್ಲಿ ಮದ್ದೂರಮ್ಮನವರ ಸಿಡಿ ಉತ್ಸವ ನಡೆಯಲಿದ್ದು ಸಿಡಿ ಉತ್ಸವದಲ್ಲಿ ಭಕ್ತಾದಿಗಳು ಹಾಗೂ ನವ ವಧು-ವರರು ಭಾಗವಹಿಸಿ ಬಾಯಿ ಬೀಗ ಸೇರಿದಂತೆ ಇತರೆ ಹರಕೆ-ಹವನಗಳನ್ನು ಸಲ್ಲಿಸುವುದು ಹಿಂದಿನಿಂದ ಬಂದಿರುವ ಪ್ರತೀತಿ. ಅಲ್ಲದೇ, ಮಕ್ಕಳನ್ನು ಸಿಡಿಯ ಕಾಗಡಿಯಲ್ಲಿ ಸುತ್ತಿಸಿದರೆ ವ್ಯಾದಿಗಳು ಬರುವುದಿಲ್ಲವೆಂಬ ನಂಬಿಕೆಯಿದ್ದು, ಮಕ್ಕಳನ್ನು ಸಿಡಿ ಕಾಗಡಿಯಲ್ಲಿಟ್ಟು ಸುತ್ತಿಸುವ ಕಾರ್ಯಕ್ರಮ ನಡೆಯಲಿದೆ.

## ಕೊಡಗಿನಿಂದ ಬಂದ ಮದ್ದೂರಮ್ಮ

ಶ್ರೀ ಮದ್ದೂರಮ್ಮ ಮೂಲತಃ ಕೊಡಗಿನ ದೇವತೆಯಾಗಿದ್ದು, ಅಲ್ಲಿನ ಭೈರಶೆಟ್ಟಿ ಎಂಬಾತ ಮದ್ದೂರಿನಲ್ಲಿ ಹಿಂದೆ ಅಡಿಕೆ ವ್ಯಾಪಾರ ಮಾಡುತ್ತಿದ್ದು, ಈತನಿಗೆ ವೇಶ್ಯೆ ಸಂಪರ್ಕವಿತ್ತು. ಇದನ್ನರಿತ ಬಂಧುಗಳು ಆತನ ಹತ್ಯೆಗೆ ನಿರ್ಧರಿಸಿದರೆಂಬುದು ಇತಿಹಾಸದಲ್ಲಿ ಉಲ್ಲೇಖವಿದೆ. ಇದರ ಸುಳಿವರಿತ ಭೈರಶೆಟ್ಟಿ ಜೀವಭಯದಿಂದ ತನ್ನ ಮನೆ ದೇವರಾದ ಮದ್ದೂರಮ್ಮ ಹಾಗೂ ಸಹೋದರಿಯರಾದ ಸಪ್ತ ಮಾತೃಕೆಯರ ಮೊರೆಹೋಗಿ ಹರಕೆ ಹೊತ್ತುಕೊಳ್ಳುತ್ತಾನೆ ಎನ್ನಲಾಗಿದೆ.

ಎಂದಿನಂತೆ ಎತ್ತಿನಗಾಡಿಯಲ್ಲಿ ಅಡಿಕೆಕಾಯಿ ತುಂಬಿ ವ್ಯಾಪಾರಕ್ಕೆಂದು ಮದ್ದೂರಿಗೆ ಬಂದ ವೇಳೆ ಈತನ ಕಷ್ಟಕ್ಕೆ ಓಗಟ್ಟ ಮದ್ದೂರಮ್ಮ ಮುದುಕಿಯ ವೇಷ ಧರಿಸಿ ನಾನಿರುವಷ್ಟು ದಿನ ಬರ್ತೀನಿ ಕಣಪ್ಪ... ಎಂದು ಹೇಳಿ ಎತ್ತಿನಗಾಡಿ ಏರಿ ಕುಳಿತು ಮದ್ದೂರಿನತ್ತ ಈತನೊಟ್ಟಿಗೆ ಬಂದರೆನ್ನಲಾಗಿದೆ.

ಮದ್ದೂರಿನ ಸುಂಕದಕಟ್ಟೆಗೆ ಭರಿಸಲುಹಣವಿಲ್ಲದೇ, ದಿಗಿಲುಗೊಂಡ ಭೈರಶೆಟ್ಟಿ ಮತ್ತೆ ತಮ್ಮ ಕುಲದೇವತೆ ಮದ್ದೂರಮ್ಮನನ್ನು ಪ್ರಾರ್ಥಿಸುತ್ತಿದ್ದಂತೆ, ಗಾಡಿಯಲ್ಲಿದ್ದ ಅಡಿಕೆಕಾಯಿ ಅರಳೆ ಕಾಯಿಗಳಾಗಿ ರೂಪಗೊಂಡಿತ್ತಲ್ಲದೇ, ಅರಳೆಕಾಯಿಗೆ ಸುಂಕವಿಲ್ಲದ ಕಾರಣ ಗಾಡಿ ಮುಂದೆ ಚಲಿಸಿ ಮದ್ದೂರು ತೋಪಿಗೆ ಬಂದು ನಿಂತಿದೆ.

ಗಾಡಿಯ ಹಿಂದೆ ಮುದುಕಿಯಂತೆ ಕುಳಿತಿದ್ದ ತಾಯಿ ಗುಂಡುತೋಪು ನೋಡಿ ಮನಸ್ಸಿಗೆ ಹಿಡಿಸಲಾಗಿ ಗುಂಡುತೋಪಿನ ಒಡೆಯ ಮದ್ದೂರು ನರಸಿಂಹಸ್ವಾಮಿಯನ್ನು ಸ್ಮರಿಸಿ ಜಾಗದಲ್ಲಿ ನೆಲೆನಿಲ್ಲಲು ಅವಕಾಶ ಕೋರಿ ಗಾಡಿಯಿಂದ ಕೆಳಗಿಳಿದು ಈಗಿರುವ ಮೂಲ ತಾಣದಲ್ಲಿ ನೆಲೆನಿಂತ ಇತಿಹಾಸವಿದೆ. ಅದೇ ರಾತ್ರಿ ಭೈರಶೆಟ್ಟಿಯ ಕನಸಿನಲ್ಲಿ ಬಂದು ನಾನು ನಿನ್ನ ಪ್ರೇಯಸಿಯ ಮನೆದೇವರು. ನಿನಗೆ ಉಪಕಾರ ಮಾಡಬೇಕೆಂದು ಕೊಡಗಿನಿಂದ ಮದ್ದೂರಿಗೆ ನಿನ್ನ ಗಾಡಿಯಲ್ಲಿ ಬಂದಿದ್ದೇನೆ. ಇಂದಿನಿಂದ ನಿನ್ನ ಪೂಜೆ, ಸೇವೆ ಮುಂದುವರಿಸುವಂತೆ ತಾಯಿ ಸೂಚಿಸಿದಳೆನ್ನಲಾಗಿದೆ. ಅಂದಿನಿಂದ ಆರಂಭಗೊಂಡ ಮದ್ದೂರಮ್ಮನವರ ಪೂಜಾ ಕೈಂಕರ್ಯ ಭೈರಶೆಟ್ಟಿಯವರ ಮನೆಯ ನಿಷ್ಠೆಯುಳ್ಳ ಆಳು ಅಗ್ನಿವಂಶ ಕ್ಷತ್ರಿಯ ಕುಲದ ತಿಗಳರ ಯಾಮಯ್ಯ ಅವರ ಕುಟುಂಬಸ್ಥರು ವಿವಿಧ ಪೂಜಾ ಕೈಂಕರ್ಯಗಳನ್ನು ಮುಂದುವರಿಸಿದ್ದಾರೆ.



## ವಿಜೃಂಭಣೆಯ ದನಗಳ ಜಾತ್ರೆ

ಪ್ರತಿವರ್ಷ ನಡೆಯುವ ಜಾತ್ರೋತ್ಸವದೊಂದಿಗೆ ದನಗಳ ಜಾತ್ರೆ ಚಾಲ್ತಿಯಲ್ಲಿದ್ದು, ಮದ್ದೂರು ದನಗಳ ಜಾತ್ರೆಗೆ ಮಂಡ್ಯ ಜಿಲ್ಲೆ ಸೇರಿದಂತೆ ರಾಜ್ಯ ಹಾಗೂ ಹೊರ ರಾಜ್ಯಗಳಿಂದಲೂ ರೈತರು ಆಗಮಿಸುವ ಪ್ರತೀತಿ ಹಿಂದಿನಿಂದಲೂ ನಡೆದು ಬಂದಿದೆ. ◆

# ಹಲವು ವೈಶಿಷ್ಟ್ಯಗಳ ಉಗ್ರ ನರಸಿಂಹ ದೇವಸ್ಥಾನ



**ಹಿರಣ್ಯಕಶಿಪು ಸಂಹಾರ ಕಾಲದಲ್ಲಿ ಸ್ವಾಮಿಗೆ 3ನೇ ಕಣ್ಣು ಉದ್ಭವ**

ಮದ್ದೂರು ತಾಲೂಕಿನ ಹನುಮಂತನಗರದ ಆತ್ಮಲಿಂಗೇಶ್ವರ, ಚಿಕ್ಕರಸಿನಕೆರೆ ಕಾಲಭೈರವೇಶ್ವರ, ಕದಲೀಪುರದ ಲಕ್ಷ್ಮೀ ವೆಂಕಟೇಶ್ವರ, ಹೆಮ್ಮನಹಳ್ಳಿ ಚೌಡೇಶ್ವರಿ, ಮಲ್ಲನಕುಪ್ಪೆ ದಂಡಿನಮಾರಮ್ಮ, ಕೊಪ್ಪ ಹೋಬಳಿಯ ಆಬಲವಾಡಿ ಗ್ರಾಮದ ತೋಪಿನ ತಿಮ್ಮಪ್ಪ ದೇವಾಲಯ, ಪಟ್ಟಣದ ಹೊಳೆ ಆಂಜನೇಯಸ್ವಾಮಿ, ಶ್ರೀಉಗ್ರನರಸಿಂಹಸ್ವಾಮಿ, ಶಕ್ತದೇವತೆ ಮದ್ದೂರಮ್ಮ, ಹಳೇ ಬಸ್ ನಿಲ್ದಾಣದ ಕಾಶಿ ವಿಶ್ವೇಶ್ವರ ದೇವಾಲಯ, ಕೋಟೆ ಮಾರಮ್ಮ ಹಾಗೂ ಶ್ರೀ ರಾಘವೇಂದ್ರಸ್ವಾಮಿ ದೇಗುಲಗಳು ಮದ್ದೂರು ತಾಲೂಕಿನ ಪ್ರಮುಖ ಧಾರ್ಮಿಕ ಕ್ಷೇತ್ರಗಳಾಗಿದ್ದು, ಒಂದೊಂದು ದೇವಾಲಯಗಳು ತಮ್ಮದೇ ಆದ ಇತಿಹಾಸ, ಮಹತ್ವವನ್ನು ಹೊಂದುವ ಮೂಲಕ ತಾಲೂಕನ್ನು ಧಾರ್ಮಿಕ ಕ್ಷೇತ್ರದ ನೆಲೆಬೀಡಾಗಿಸಿವೆ.

ಪಟ್ಟಣದಲ್ಲಿರುವ ಶ್ರೀ ಉಗ್ರನರಸಿಂಹ ಸ್ವಾಮಿ ದೇವರ ವಿಗ್ರಹ ವಿಶ್ವದಲ್ಲಿ ಬಹು ಇತಿಹಾಸ ಹೊಂದಿದ್ದು, ನೆರೆಯ ರಾಜ್ಯಗಳಾದ ಕೇರಳ, ತಮಿಳುನಾಡು, ಆಂಧ್ರ ಪ್ರದೇಶ ಸೇರಿದಂತೆ ಜಿಲ್ಲೆಯ ವಿವಿಧೆಡೆಗಳಿಂದ ಅಪಾರ ಸಂಖ್ಯೆಯ ಭಕ್ತಾದಿಗಳು ಸ್ವಾಮಿ ದರ್ಶನಕ್ಕೆ ಆಗಮಿಸುತ್ತಾರೆ. ದೇವಾಲಯದಲ್ಲಿ ಸ್ವಾಮಿ ಅವರ ಬ್ರಹ್ಮ ರಥೋತ್ಸವ ಹಾಗೂ ಇನ್ನಿತರ ಪೂಜಾ ವಿಧಿ ವಿಧಾನಗಳು ನೆರವೇರಲಿದ್ದು, ಅಪಾರ ಸಂಖ್ಯೆಯ ಭಕ್ತರನ್ನು ಹೊಂದಿದೆ.

ನರಸಿಂಹಸ್ವಾಮಿ ದೇವಾಲಯಕ್ಕೆ ತನ್ನದೇ ಆದ ವೈಶಿಷ್ಟ್ಯತೆ ಮತ್ತು ಇತಿಹಾಸವಿದ್ದು, ಈ ಹಿಂದೆ ದ್ವಾಪರಾಂತ್ಯದಲ್ಲಿ ಅರ್ಜುನನು ಶ್ರೀ ಕೃಷ್ಣನ ಕುರಿತು ನರಸಿಂಹ ಅವತಾರವನ್ನು ನೋಡಬೇಕೆಂದು ಅಪೇಕ್ಷೆ ಪಟ್ಟಾಗ ಶ್ರೀ ಕೃಷ್ಣನು ನರಸಿಂಹನ ಅವತಾರ ತೋರಿಸಲು ಸಾಧ್ಯವಿಲ್ಲವೆಂದು ಶಿಲಾರೂಪದಲ್ಲಿ ಬ್ರಹ್ಮದೇವರ ಮುಖಾಂತರ ಇಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದ್ದು, ಈ ಹಿನ್ನೆಲೆಯಲ್ಲಿ ಈ ಊರಿಗೆ ಅರ್ಜುನಪುರಿ ಎಂಬ ಹೆಸರಿದೆ ಎಂದು ಪ್ರತೀತಿ ಇದೆ.

## ಸ್ವಾಮಿಗೆ ಎಂಟು ಕೈಗಳು, ಮೂರು ಕಣ್ಣು

ಶ್ರೀ ನರಸಿಂಹ ಸ್ವಾಮಿ ಅವರಿಗೆ ಎಂಟು ಕೈಗಳು, ಮೂರು ಕಣ್ಣು ಇದ್ದು, ಎಂಟು ಕೈಗಳ ಪೈಕಿ ಎರಡು ಕೈಗಳಲ್ಲಿಂದ ತೊಡೆಯ ಮೇಲೆ ಮಲಗಿಸಿಕೊಂಡಿರುವ ಹಿರಣ್ಯ ಕಶ್ಯಪುವಿನ ಕರುಳನ್ನು ಬಗೆಯುತ್ತಿರುವ, ಮತ್ತೆರಡು ಕೈಗಳಲ್ಲಿ ಈ ಕರಳನ್ನು ಮಾಲೆಯಾಗಿ ಹಾಕಿಕೊಳ್ಳುತ್ತಿರುವ, ಇನ್ನೆರಡು ಕೈಗಳಲ್ಲಿ ಪಾಶಾಂಕುಶಗಳನ್ನು ಹೊಂದಿರುವ ಹಾಗೂ ಉಳಿದೆರಡು ಕೈಗಳಲ್ಲಿ ಶಂಕ ಚಕ್ರಧಾರೆಯಾಗಿ ಅವತರಿಸಿದ್ದಾರೆ.

ಶ್ರೀ ನರಸಿಂಹಸ್ವಾಮಿ ದೇವರ ಎಡ ಭಾಗದಲ್ಲಿ ಗರುಡ ಹಾಗೂ ಬಲ ಭಾಗದಲ್ಲ ಭಕ್ತಪ್ರಹ್ಲಾದ ಮೂರ್ತಿ ವಿನಮ್ರವಾಗಿ ನಿಂತಿದ್ದಾರೆ. ಶ್ರೀ ಸ್ವಾಮಿಯವರಿಗೆ 3ನೇ ಕಣ್ಣು ಹಿರಣ್ಯ ಕಶ್ಯಪನ ಸಂಹಾರ ಕಾಲದಲ್ಲಿ ಉದ್ಭವವಾಯಿತೆಂಬ ಪ್ರತೀತಿ ಇದ್ದು, ಶ್ರೀಸ್ವಾಮಿಯವರ ದೇವಸ್ಥಾನ ಒಳಾಂಗಣದಲ್ಲಿ ಶ್ರೀ ಶ್ರೀನಿವಾಸ ದೇವರ ಹಾಗೂ ಶ್ರೀ ಕೃಷ್ಣನಿಗೆ ಸ್ತನ್ಯಪಾನ ಮಾಡಿಸುತ್ತಿರುವ ಯಶೋಧ ವಿಗ್ರಹಗಳು ಆಕರ್ಷಿತವಾಗಿವೆ. ಒಳ ಪ್ರಕಾರದಲ್ಲಿ ಶ್ರೀ ಸ್ವಾಮಿಯವರ ಪತ್ನಿಯರಾದ ಶ್ರೀ ಸೌಮ್ಯನಾಯಕಿ, ಶ್ರೀ ನರಸಿಂಹನಾಯಕಿ ವಿಗ್ರಹಗಳೂ, ಸುಂದರವಾದ ಶ್ರೀ ಸೀತಾ ರಾಮಲಕ್ಷ್ಮಣ ಮತ್ತು ಆಂಜನೇಯ ಸ್ವಾಮಿ ವಿಗ್ರಹಗಳನ್ನು ಪ್ರತಿಷ್ಠಪಿಸಲಾಗಿದೆ.



## ಹೊಯ್ಸಳರ ಕಾಲದಲ್ಲಿ ಜೀರ್ಣೋದ್ಧಾರ

ಈ ದೇವಾಲಯ ಹೋಯ್ಸಳರ ಕಾಲದಲ್ಲಿ ಜೀರ್ಣೋದ್ಧಾರವಾಯಿತೆಂದು ಉಲ್ಲೇಖವಿದೆ. ಹಿಂದೆ ಕದಂಬ ಋಷಿಗಳು ಸಮೀಪದಲ್ಲಿ ಹರಿಯುತ್ತಿರುವ ನದಿಯಲ್ಲಿ ಮಿಂದು ಶ್ರೀ ಸ್ವಾಮಿ ಸೇವೆ ನಡೆಸುತ್ತಿದ್ದರಿಂದ ಇದನ್ನು ಕದಂಬ ಪುಣ್ಯ ಕ್ಷೇತ್ರವೆಂತಲೂ ಈ ನದಿಗೆ ಕದಂಬ ನದಿ ಎಂದು ಹೆಸರು ಇತ್ತೆಂಬುದು ಇತಿಹಾಸದಿಂದ ತಿಳಿದು ಬರುತ್ತದೆ. ಕೆಲವು ಶತಮಾನಗಳ ಹಿಂದೆ ಪಾಳೆಗಾರರ ಆಳ್ವಿಕೆ ಕಾಲದಲ್ಲಿ ಮದ್ದು-ಗುಂಡುಗಳನ್ನು ತಯಾರಿಸಿ ಶೇಖರಿಸುತ್ತಿದ್ದರಿಂದ ಈ ಊರಿಗೆ ಮದ್ದೂರು ಎಂಬ ಹೆಸರು ಬಂದಿತೆಂದು ಪ್ರತೀತಿ ಇದೆ. ಶ್ರೀ ನರಸಿಂಹಸ್ವಾಮಿ ದೇವಸ್ಥಾನದ ಎಡ ಪಾರ್ಶ್ವದಲ್ಲಿ ಶ್ರೀ ವರದರಾಜ ಸ್ವಾಮಿ ಮತ್ತು ಶ್ರೀ ರಾಮದೇವರ ದೇವಸ್ಥಾನಗಳು ಇವೆ. ಈ ದೇವಸ್ಥಾನಗಳನ್ನು ಹೊಯ್ಸಳರ ದೊರೆ ಶ್ರೀ ವಿಷ್ಣುವರ್ಧನ ಮಹಾರಾಜನ ತಾಯಿಗೆ ದೃಷ್ಟಿದೋಷವಿದ್ದುದರಿಂದ ಕಂಚಿಗೆ ಹೋಗಿ ಶ್ರೀ ವರದರಾಜಸ್ವಾಮಿ ಅವರ ದರ್ಶನ ಮಾಡಿ ದೋಷ ನಿವಾರಿಸಿ ಕೊಳ್ಳುವಂತೆ ಶ್ರೀ ರಾಮಾನುಜಾಚಾರ್ಯರಿಂದ ಪ್ರೇರಣೆಯಾಯಿತು.

ವಯೋವೃದ್ಧರಾದ ಅವರನ್ನು ಅಲ್ಲಿಗೆ ಕರೆದುಕೊಂಡು ಹೋಗುವುದು ಸಾಧ್ಯವಿಲ್ಲವೆಂದು ಕಂಚಿಯಿಂದಲೇ ಕೆಲವು ಶಿಲ್ಪಿಗಳನ್ನು ಕರೆಸಿ ಕಂಚಿಯಲ್ಲಿ ಇರುವಂತೆಯೇ ಬಹುಸುಂದರ ಮೂರ್ತಿಯನ್ನು ಕಡೆದು ಪ್ರತಿಷ್ಠಾಪಿಸಲ್ಪಟ್ಟಿತು. ನಂತರ ಆ ರಾಜನ ತಾಯಿಯು ಶ್ರೀ ಸ್ವಾಮಿಯ ದರ್ಶನ ಭಾಗ್ಯ ಪಡೆದು ದೃಷ್ಟಿದೋಷ ಪರಿಹರಿಸಿಕೊಂಡಿದ್ದರಿಂದ ಈ ಸ್ವಾಮಿಗೆ ಕಂಚಿ ಕಣ್ವರದರಾಜ ಸ್ವಾಮಿ ಎಂದು ಕರೆಯುವ ಪ್ರತೀತಿ ಇದೆ.



ಶಂಖ ಚಕ್ರಗಧಾ ಪದ್ಮದಲ್ಲಿರುವ ಶ್ರೀ ವರದರಾಜು ಸ್ವಾಮಿ ಅವರ ವಕ್ಷಸ್ಥಳದಲ್ಲಿ ಶ್ರೀ ಮಹಾಲಕ್ಷ್ಮೀ ನೆಲೆಸಿದ್ದಾರೆ. ಈ ಊರಿನ ಗ್ರಾಮ ದೇವತೆಯಾದ ಶ್ರೀ ಮದ್ದೂರಮ್ಮನವರ ದೇವಸ್ಥಾನ ಈ ದೇವಸ್ಥಾನದ ಹಿಂಭಾಗದಲ್ಲಿದೆ. ಇದು ಸಹ ಬಹಳ ಪ್ರಸಿದ್ಧ ದೇವಸ್ಥಾನವಾಗಿದೆ. ದಿನನಿತ್ಯ ವರದರಾಜಸ್ವಾಮಿ ಹಾಗೂ ನರಸಿಂಹ ಸ್ವಾಮಿ ಸೇರಿದಂತೆ ಇನ್ನಿತರ ದೇವರುಗಳಿಗೆ ಬೆಳಿಗ್ಗೆ ಮತ್ತು ಸಂಜೆ ವಿವಿಧ ಪೂಜಾ ಕೈಂಕರ್ಯಗಳು ನೆರವೇರಲಿವೆ. ◆



**ಭಕ್ತರ ಆಪತ್ಬಾಂಧವ ಹೇಮಗಿರಿಯ ವೆಂಕಟರಮಣ ಸ್ವಾಮಿ**



# ಚಿನ್ನದ ಬೆಟ್ಟದಲ್ಲಿ ರಂಗನಾಥನ ಹೊಳಪು



■ ಅರುಣ್ ಕುಮಾರ್, ಕೆ.ಆರ್.ಪೇಟೆ

ಭೃಗು ಮಹರ್ಷಿಗಳ ಕಠಿಣ ತಪಸ್ಸಿಗೆ ಮೆಚ್ಚಿ ಮಹಾವಿಷ್ಣು ದರ್ಶನ ಭಾಗ್ಯ ಕರುಣಿಸಿದ ಪವಿತ್ರ ಕ್ಷೇತ್ರ ಹೇಮಗಿರಿ. ಇಲ್ಲಿ ಸುಮಾರು 150 ಮೆಟ್ಟಿಲು ಇರುವ ಬೆಟ್ಟದ ಮೇಲೆ ನೆಲೆಸಿರುವ ಕಲ್ಯಾಣ ವೆಂಕಟರಮಣಸ್ವಾಮಿ ದೇವಾಲಯವೇ ಪ್ರಮುಖ ಆಕರ್ಷಣೆ. ರಂಗನಾಥ ಎಂತಲೂ ಕರೆಸಿಕೊಳ್ಳುವ ವೆಂಕಟರಮಣಸ್ವಾಮಿ ಸಹಸ್ರಾರು ಭಕ್ತರ ಪಾಲಿಗೆ ಕಷ್ಟ, ಸಮಸ್ಯೆಗಳನ್ನು ನಿವಾರಿಸೋ ಆಪತ್ಬಾಂದವನಾಗಿ ಹೇಮಗಿರಿ ಕ್ಷೇತ್ರದಲ್ಲಿ ನೆಲೆ ನಿಂತಿದ್ದಾನೆ.

ಪ್ರಾಚೀನ ಇತಿಹಾಸ ಇರುವ ಈ ಸ್ಥಳದಲ್ಲಿ ಭೃಗು ಮಹರ್ಷಿಗಳು ತಪಸ್ಸು ಮಾಡಿದ ಗವಿಯುಂಟು. ಹೇಮಾವತಿ ನದಿ ಬೆಟ್ಟದ ವೆಂಕಟರಮಣನ ಪಾದಕ್ಕೆ ನಮಸ್ಕರಿಸಿ ಮುನ್ನಡೆಯುತ್ತಾಳೆ. ಹೇಮಾವತಿ ನದಿ ಇಲ್ಲಿ ದ್ವೀಪವನ್ನು ಸೃಷ್ಟಿಸಿದ್ದು, ವಿವಿಧ ಜಾತಿಯ ಹಕ್ಕಿ-ಪಕ್ಷಿ, ಜೀವಜಂತುಗಳ ಆವಾಸಸ್ಥಾನವಾಗಿದೆ. ಹೇಮಗಿರಿ ಬೆಟ್ಟವು ನಾನಾ ರೀತಿಯ ಪ್ರಾಣಿ ಪಕ್ಷಿಗಳಿಗೆ ಹಾಗೂ ವಿವಿಧ ರೀತಿಯ ಔಷಧೀಯ ಸಸ್ಯಗಳ ತಾಣವಾಗಿದೆ.

ಹೇಮ ಎಂದರೆ ಚಿನ್ನ ಎಂಬ ಅರ್ಥವಿದ್ದರೆ, ಗಿರಿ ಎಂದರೆ ಗುಡ್ಡ, ಎತ್ತರ ಎಂದರ್ಥ ಬರುತ್ತದೆ. ಹೀಗಾಗಿ ಹೇಮಗಿರಿ ಎಂದರೆ ಚಿನ್ನದ ಬೆಟ್ಟ ಎಂದೇ ಅರ್ಥ. ಶತಮಾನದ ಹಿಂದೆಯೇ ಮೈಸೂರು ಮಹಾರಾಜರು ಹೇಮಗಿರಿಯ ಬಳಿ ಒಡ್ಡೊಂದನ್ನು ನಿರ್ಮಿಸಿ ಕೃಷಿಗೆ ಅನುಕೂಲ ಮಾಡಿಕೊಟ್ಟಿದ್ದು, ಇದು ಕಿರು ಜಲಪಾತವನ್ನೇ ನಿರ್ಮಾಣ ಮಾಡಿದೆ.

## ಭೂ ವೈಕುಂಠದಷ್ಟೇ ಶ್ರೇಷ್ಠ ಸ್ಥಳ

ಹೇಮಾವತಿ ನದಿ ಪಶ್ಚಿಮ ವಾಹಿನಿಯಾಗಿ ಹರಿಯುವುದರಿಂದ ಈ ಸ್ಥಳವೂ ಭೂ ವೈಕುಂಠದಷ್ಟೇ ಶ್ರೇಷ್ಠವಾಗಿದೆ. ಸಾಕ್ಷಾತ್ ಮಹಾವಿಷ್ಣುವೇ ತನ್ನ ವಿಶ್ರಾಂತಿಗಾಗಿ ಇಲ್ಲಿಗೆ ಬರುತ್ತಿದ್ದನೆಂದು ಉಪನಿಷತ್ತಿನಲ್ಲಿ ಹೇಳಲಾಗಿದೆ ಎನ್ನುತ್ತಾರೆ ಇಲ್ಲಿನ ಅರ್ಚಕರಾದ ರಾಮಭಟ್ಟರು.

ಸುಕ್ಷೇತ್ರದಲ್ಲಿ ಶ್ರಾವಣಮಾಸ, ಕಾರ್ತಿಕ ಮಾಸ, ವೈಕುಂಠ ಏಕಾದಶಿಯಂದು ಶ್ರೀಕಲ್ಯಾಣ ವೆಂಕಟರಮಣ ಸ್ವಾಮಿಯವರಿಗೆ ವಿಶೇಷ ಪೂಜೆಗಳು ನಡೆಯುತ್ತವೆ. ಅಲ್ಲದೇ, ವಿವಿಧ ಹಬ್ಬ ಹರಿದಿನಗಳಲ್ಲಿ ವಿಶೇಷ ಪೂಜೆ ನೆರವೇರುತ್ತವೆ.

## ಪ್ರವಾಸಿಗರನ್ನು ಕೈಬೀಸಿ ಕರೆವ ಹೇಮಾವತಿ ಫಾಲ್ಸ್

ಹೇಮಗಿರಿಯಲ್ಲಿ ಬಾಗುತ್ತಾ, ಬಳುಕುತ್ತಾ, ಮೈದುಂಬಿ ಹರಿಯುತ್ತಿರುವ ಹೇಮಾವತಿ ನದಿ ಕಂಡಾಗ ಮನಸ್ಸು ಪ್ರಫುಲ್ಲವಾಗುತ್ತದೆ. ಹೇಮ ಎಂದರೆ ಚಿನ್ನ, ಗಿರಿ ಎಂದರೆ ಬೆಟ್ಟ, ಈ ಚಿನ್ನದ ಬೆಟ್ಟದಲ್ಲಿ ಸೃಷ್ಟಿಯಾಗಿರುವ ದ್ವೀಪಗಳ ನಡುವೆ ಮರಗಳ ಗುಚ್ಛವೇ ಇದೆ. ಈ ಮರಗಳು ವಿವಿಧ ಜಾತಿಗಳ ಹಕ್ಕಿಗಳಿಗೆ ಆಶ್ರಯ ನೀಡುವ ಪಕ್ಷಿಧಾಮವಾಗಿದೆ.

ಜುಳು-ಜುಳು ನಾದದಿಂದ ಹರಿದು ಬರುವ ಹೇಮಾವತಿ, ಇಲ್ಲಿನ ಬೆಟ್ಟದ ಒಡೆಯ ಕಲ್ಯಾಣ ವೆಂಕಟರಮಣನ ಪಾದ ಸ್ಪರ್ಶಿಸಿಯೇ ಮುಂದೆ ಸಾಗುತ್ತಾಳೆ. ಶತಮಾನದ ಹಿಂದೆಯೇ ಈ ನದಿಗೆ ಮೈಸೂರಿನ ಮಹಾ ರಾಜರು ಹೇಮಗಿರಿಯ ಬಳಿ ಒಂದು ಒಡ್ಡು ನಿರ್ಮಿಸಿ, ನೀರು ನಿಲ್ಲುವಂತೆ ಮಾಡಿದ್ದಾರೆ. ಈ ನೀರು ನಾಲೆ ಮೂಲಕ ಹರಿದು ಕೃಷಿ ಚಟುವಟಿಕೆಗಳಿಗೆ ಅನುಕೂಲ ವಾಗಬೇಕೆಂಬುದು ಅವರ ಉದ್ದೇಶವಾಗಿತ್ತು. ಈ ಒಡ್ಡು ನಿರ್ಮಿಸಿರುವ ಜಾಗದಲ್ಲಿ ಧುಮ್ಮಿಕ್ಕುವ ನೀರನ್ನು ಇಲ್ಲಿನವರು ಬ್ಲಫ್ ಎಂದೇ ಕರೆಯುತ್ತಾರೆ. ಇದನ್ನು ನೋಡಲು ಪ್ರತಿದಿನ ಸಾವಿರಾರು ಪ್ರವಾಸಿಗಳು ಆಗಮಿಸುತ್ತಾರೆ.

## ಸುಪ್ರಸಿದ್ಧ ಹೇಮಗಿರಿ ಜಾನುವಾರು ಜಾತ್ರೆ

ಹೇಮಗಿರಿ ದನಗಳ ಜಾತ್ರೆ ಎಂದರೆ ರಾಜ್ಯದ ಮೂಲೆ ಮೂಲೆಗಳಲ್ಲಿರುವ ರೈತಾಪಿ ಜನರಲ್ಲಿ ಸಂಭ್ರಮವೋ ಸಂಭ್ರಮ. ಸಂಕ್ರಾಂತಿ ಕಳೆದ 15 ದಿನಗಳ ನಂತರ ಆರಂಭವಾಗಿ ತೆಪ್ಪೋತ್ಸವ ಮೂಲಕ ಸಂಪನ್ನಗೊಳ್ಳುವ ಜಾತ್ರೆ ದನಗಳ ಜಾತ್ರೆಯೆಂದೇ ಪ್ರಸಿದ್ಧವಾಗಿದೆ. ಹೇಮಗಿರಿ ಬೆಟ್ಟದ ತಪ್ಪಲಿನಲ್ಲಿ ನಡೆಯುವ ದನಗಳ ಜಾತ್ರೆಗೆ ರಾಜ್ಯದ ನಾನಾ ಭಾಗಗಳಿಂದ ಅಲ್ಲದೇ ನೆರೆಯ ರಾಜ್ಯಗಳಾದ ಆಂಧ್ರಪ್ರದೇಶ, ತೆಲಂಗಾಣ, ಮಹಾರಾಷ್ಟ್ರ ಕೇರಳ, ತಮಿಳುನಾಡು ಗಡಿಗಳಿಂದಲೂ ರೈತರು ಮತ್ತು ವ್ಯಾಪಾರಸ್ಥರು ಭಾಗವಹಿಸುವುದು ನೂರಾರು ವರ್ಷಗಳಿಂದ ನಡೆದುಕೊಂಡು ಬಂದಿದೆ. ಮೈಸೂರು ಒಡೆಯರ ಪ್ರೋತ್ಸಾಹದಿಂದ ಬ್ರಿಟಿಷರ ಆಡಳಿತದಲ್ಲೂ ದನಗಳ ಜಾತ್ರೆ ಗಮನಸೆಳೆದಿತ್ತು. ಪ್ರತಿವರ್ಷ ಹೇಮಗಿರಿಯಲ್ಲಿ ಚುಮು-ಚುಮು ಚಳಿಯಲ್ಲೂ ರೈತರು ತಮ್ಮ ರಾಸುಗಳೊಂದಿಗೆ ಭಾಗವಹಿಸಿ, ರಾಸುಗಳ ಮಾರಾಟ ಮಾಡಿ, ಹೊಸ ರಾಸು ಖರೀದಿಸುವುದೇ ಜಾನುವಾರು ಜಾತ್ರೆಯ ವಿಶೇಷ. ◆



**ಶ್ರೀ ಕ್ಷೇತ್ರಕ್ಕೆ ನಿತ್ಯ ಸಾವಿರಾರು ಭಕ್ತರ ಆಗಮನ**

**ಧಾರ್ಮಿಕ ಕ್ಷೇತ್ರವಾದ್ರೂ ಪ್ರವಾಸಿ ತಾಣಕ್ಕೆ ಹೇಳಿ ಮಾಡಿಸಿದ ಸ್ಥಳ**





# ಕಾವೇರಿ ತೀರದ ನಿಮಿಷಾಂಬ

■ ಗಂಜಾಂ ಮಂಜು, ಶ್ರೀರಂಗಪಟ್ಟಣ

ಧಾರ್ಮಿಕ ಕ್ಷೇತ್ರದ ಜೊತಗೆ ಪ್ರವಾಸಿ ತಾಣವೂ ಆಗಿರುವ ಶ್ರೀ ನಿಮಿಷಾಂಬ ತಾಯಿ ಅಪಾರ ಸಂಖ್ಯೆಯ ಭಕ್ತರ ಆರಾಧ್ಯ ದೈವವಾಗಿದ್ದು, ಕಷ್ಟ ನಿವಾರಣೆ ಎಂದು ಬೇಡಿ ಬಂದ ಭಕ್ತರ ಪಾಲಿಗೆ ವರವನ್ನು ಕರುಣಿಸೋ ಮಾತೃಸ್ವರೂಪಿಯಾಗಿ ಶ್ರೀರಂಗಪಟ್ಟಣದ ಗಂಜಾಂನಲ್ಲಿ ನೆಲೆ ನಿಂತಿದ್ದಾಳೆ. ಭಕ್ತರಿಗೆ ನೆಮ್ಮದಿ ಒದಗಿಸಿ, ಹಸಿವು ನೀಗಿಸುವ ಪ್ರಸಿದ್ಧ ಪ್ರವಾಸಿ ತಾಣವಾಗಿರುವ ನಿಮಿಷಾಂಬ ದೇವಾಲಯದಲ್ಲಿ ನಿತ್ಯ ಪೂಜೆ ಜೊತೆಗೆ, ಭಕ್ತರಿಗೆ ನಿತ್ಯ ದಾಸೋಹ ಕಾರ್ಯ ಹಿಂದಿನಿಂದಲೂ ನಡೆದುಕೊಂಡು ಬಂದಿದೆ.

ನಿಮಿಷಾಂಬ ದೇವಾಲಯ ಜಿಲ್ಲೆಯಲ್ಲಿ ಅತಿಹೆಚ್ಚು ಆದಾಯ ಬರುವ ಮೊದಲ ದೇವಾಲಯವಾಗಿದೆ. ನೂರಾರು ಮೈಲಿಗಳಿಂದ ಹಸಿದು ಬಂದ ಭಕ್ತರಿಗೆ ಪ್ರಸಾದ ರೂಪದಲ್ಲಿ ಹೊಟ್ಟೆ ತುಂಬಿಸುವ ಕಾರ್ಯ ನಡೆಸಲಾಗುತ್ತಿದೆ. ದೇವಿಯ ಶಕ್ತಿ ಎಲ್ಲೆಡೆ ಪಸರಿಸುತ್ತಿದ್ದು, ದೇವಾಲಯಕ್ಕೆ ಆಗಮಿಸುವ ಭಕ್ತರ ಸಂಖ್ಯೆ ಕೂಡ ದಿನೇದಿನೆ ಹೆಚ್ಚಾಗುತ್ತಿದೆ. ಮುಜರಾಯಿ ಇಲಾಖೆಯೊಂದಿಗೆ ಹಲವು ಭಕ್ತರು ದೇವಾಲಯದ ಪ್ರಗತಿಯಲ್ಲಿ ಕೈ ಜೋಡಿಸಿದ್ದಾರೆ.

## ನಿತ್ಯ 3 ಸಾವಿರ ಭಕ್ತರ ಆಗಮನ

ನೂರಾರು ಮೈಲಿಗಳಿಂದ ಪ್ರತಿದಿನ 2 ರಿಂದ 3 ಸಾವಿರ ಮಂದಿ ದೇವಾಲಯಕ್ಕೆ ಬಂದು ದೇವಿ ದರ್ಶನ ಪಡೆದು ತಮ್ಮ ಇಷ್ಟಾರ್ಥಗಳ ಕೋರಿಕೆಗೆ ಬೇಡುತ್ತಾರೆ. ಇನ್ನು ವಿಶೇಷ ದಿನದಲ್ಲಿ ಭಕ್ತರ ಸಂಖ್ಯೆ 4 ರಿಂದ 5 ಸಾವಿರಕ್ಕೂ ಮಿಗಿಲಾಗಿರುತ್ತದೆ. ಕಡಿಮೆ ಎಂದರೂ 2 ಸಾವಿರದಷ್ಟು ಮಂದಿ ಪ್ರತಿದಿನ ಬರುತ್ತಿದ್ದಾರೆ. ಪ್ರತಿದಿನ ಒಂದೂವರೆ ಸಾವಿರ ಮಂದಿಗೆ ದಾಸೋಹ ಕಾರ್ಯ ನಡೆಸಲಾಗುತ್ತಿದ್ದು, ಪಾಯಸ, ಪಲ್ಯ, ಅನ್ನ, ಸಾಂ ಬಾರು, ಮೊಸರು ಹೀಗೆ ಪ್ರತಿ ದಿನ ದಾಸೋಹ ನಡೆಯುತ್ತಿದೆ.

ದೇವಾಲಯದ ಆಡಳಿತ ಮಂಡಳಿ ಅಧಿಕಾರಿ ಹಾಗೂ ದೇವಾಲಯದ ಸಿಬ್ಬಂದಿ ವರ್ಗದಿಂದ ಬಂದ ಭಕ್ತರಿಗೆ ಪೂಜೆ ಸಲ್ಲಿಕೆಗೆ ಸಕಲ ನಿರ್ವಹಣೆಗೆ ವ್ಯವಸ್ಥೆ ಕಲ್ಪಿಸಲಾಗಿರುತ್ತದೆ. ದೇವಾಲಯದ ಹಿಂಭಾಗದಲ್ಲಿ 2020ರಲ್ಲಿ 6 ಕೋಟಿ ರೂ. ವೆಚ್ಚದಲ್ಲಿ ನಿರ್ಮಿಸಿ, ಉದ್ಘಾಟನೆಗೊಂಡಿದ್ದ ದಾಸೋಹ ಭವನದಲ್ಲಿ ವಿಶಾಲವಾದ ಊಟದ ಹಾಲ್‌ನಲ್ಲಿ ಪ್ರತಿದಿನ ಮಧ್ಯಾಹ್ನ 12ರಿಂದ 3.30ರವರೆಗೆ ಭಕ್ತರಿಗೆ ಊಟ ಬಡಿಸಲಾಗುತ್ತದೆ.

## ಪ್ರವಾಸಿ ತಾಣವೂ ಹೌದು

ಶ್ರೀನಿಮಿಷಾಂಬ ದೇವಿ ದೇವಾಲಯ ಧಾರ್ಮಿಕ ಕ್ಷೇತ್ರ ಜೊತೆಗೆ ಪ್ರವಾಸಿ ತಾಣವಾಗಿಯೂ ಪ್ರಖ್ಯಾತಿ ಗಳಿಸಿದೆ. ಪ್ರತಿ ಹುಣ್ಣಿಮೆ ವೈಶಾಖ ಶುದ್ಧ ದಶಮಿಯ (ನಿಮಿಷಾಂಬ ಜಯಂತಿ)ಯಂದು ದೇವಾಲಯಕ್ಕೆ ಹೆಚ್ಚಿನ ಭಕ್ತರು ಆಗಮಿಸುತ್ತಾರೆ. ದೇವಾಲಯದಲ್ಲಿ ನಿತ್ಯ ತಾಯಿಗೆ ಕುಂಕುಮಾರ್ಚನೆ, ತ್ರಿಶತಿ, ಸಹಸ್ರನಾಮ, ಸಂಕಲ್ಪ, ಮಹಾಸಂಕಲ್ಪ, ಲಲಿತಾಷ್ಟೋತ್ತರ, ಪೂಜೆಗಳು ನಡೆಯುತ್ತವೆ. ಇನ್ನು ದೂರದಿಂದಲೇ ನೋಂದಾಯಿಸಿದವರ ಹೆಸರಿನಲ್ಲಿ ವಿಶೇಷ ಅಭಿಷೇಕಗಳು, ಪಾರಾಯಣ ಮಾಡಿಸಿದವರಿಗೆ ದೇವಾಲಯದಿಂದಲೇ ಪ್ರಸಾದವನ್ನು ಕಳುಹಿಸುವ ವ್ಯವಸ್ಥೆ ಇದೆ. ನಿಮಿಷಾಂಬ ದೇವಾಲಯ ಇದೀಗ ಪ್ರವಾಸಿ ತಾಣವಾಗಿ ಭಕ್ತರಿಗೆ ಕಾಣುತ್ತಿದೆ. ಶುಕ್ರವಾರ, ಭಾನುವಾರ, ಮಂಗಳವಾರ ವಿಶೇಷವಾಗಿ ಪೂಜೆಗಳು ಜರುತ್ತಿದ್ದವು. ಭಕ್ತರು ಹೆಚ್ಚಿನ ಸಂಖ್ಯೆಯಲ್ಲಿ ಆಗಮಿಸುತ್ತಿದ್ದರು. ಇದೀಗ ರಜಾ ಸೇರಿ ಎಲ್ಲಾ ದಿನಗಳನ್ನು ಕಳೆಯಲು ಈ ದೇವಾಯಯಕ್ಕೆ ಜನರು ಬರುತ್ತಿದ್ದಾರೆ. ಕಾವೇರಿ ನದಿ ತೀರದಲ್ಲಿ ವಿಶಾಲವಾದ ಸೋಪಾನಕಟ್ಟೆ ನಿರ್ಮಿಸಿದ್ದು ನದಿಯ ಬಳಿ ಕುಳಿತು ಪ್ರವಾಸಿಗರು ಸ್ನಾನ ಮಾಡಿ ದೇವರ ದರ್ಶನ ಪಡೆಯುವುದು ಹೆಚ್ಚಾಗಿದೆ.

## ಸಕಲ ವ್ಯವಸ್ಥೆ ಕಲ್ಪಿಸಲು ಸಿದ್ಧತೆ

ಬೆಳಗ್ಗೆ 6ರಿಂದ ರಾತ್ರಿ 8.30ರವರೆಗೆ ದೇವಾಲಯ ತೆರೆದಿದ್ದು, ಹುಣ್ಣಿಮೆ ಮತ್ತು ಧನುರ್ಮಾಸಗಳಲ್ಲಿ ನಸುಕಿನ 4 ಗಂಟೆಗೆ ಅರ್ಚಕರು ದೇವಾಲಯದ ಬಾಗಿಲು ತೆರೆದು ಪೂಜೆಗೆ ಸಿದ್ಧತೆ ಮಾಡಿಕೊಳ್ಳುತ್ತಾರೆ. ಮಾಘ ಹುಣ್ಣಿಮೆ ವಿಶೇಷವಾಗಿದ್ದು, ರಾತ್ರಿ 12.30ಕ್ಕೆ ದೇವಾಲಯದಲ್ಲಿ ವಿಶೇಷ ಪೂಜೆಗಳು ನಡೆಯಲಿದ್ದು, ಲಕ್ಷಾಂತರ ಭಕ್ತರು ಕಾವೇರಿ ನದಿಯಲ್ಲಿ ಮಡಿ ಸ್ನಾನ ಮಾಡಿ ದೇವಿ ದರ್ಶನ ಪಡೆಯುವುದು ವಾಡಿಕೆ. ಯಾತ್ರಿ ನಿವಾಸ, ವಸತಿ ಗೃಹಗಳು, ಭಕ್ತರ ದಾಸೋಹ ಭವನವನ್ನು ಈಗಾಗಲೇ ನಿರ್ಮಿಸಿದ್ದು, ಮುಂದಿನ ದಿನದಲ್ಲಿ ಭಕ್ತರು ಉಳಿದುಕೊಳ್ಳಲು ಸಕಲ ವ್ಯವಸ್ಥೆ ಕಲ್ಪಿಸಲು ಸರ್ಕಾರ ಮುಂದಾಗಿದೆ. ◆



### ಭಕ್ತರಿಗೆ ನಿತ್ಯ ದಾಸೋಹ

**ಕಳೆದ ಆರು ತಿಂಗಳ ಹಿಂದೆ ನಿತ್ಯ ದಾಸೋಹ ಇರಲಿಲ್ಲ. ಮಂಗಳವಾರ, ಶುಕ್ರವಾರ ಹಾಗೂ ಭಾನುವಾರ ಮಾತ್ರ ಭಕ್ತರಿಗೆ ದಾಸೋಹದ ವ್ಯವಸ್ಥೆ ಕಲ್ಪಿಸಲಾಗಿತ್ತು. ನಿತ್ಯ ದಾಸೋಹ ಕಾರ್ಯಕ್ರಮ ನಡೆಸಲು ಸ್ಥಳೀಯ ಶಾಸಕ ರಮೇಶ್ ಬಂಡಿಸಿದ್ದೇಗೌಡ ಸೇರಿ ಇತರ ಭಕ್ತರ ಸರ್ಕಾರಕ್ಕೆ ಒತ್ತಾಯ ಮಾಡಿದ್ದರಿಂದ 2024ರ ಅ.16ರಲ್ಲಿ ಮೈಸೂರಿನ ರಾಜ ಮಾತೆ ಪ್ರಮೋದಾ ದೇವಿ ಒಡೆಯರ್ ಅವರ ಮೂಲಕ ನಿತ್ಯ ದಾಸೊಹ ಕಾರ್ಯಕ್ರಮಕ್ಕೆ ಚಾಲನೆ ದೊರೆಯಿತು. ಇದೀಗ ನಿತ್ಯ ದಾಸೋಹ ಕಾರ್ಯಕ್ರಮದಿಂದ ಭಕ್ತರು ಪೂಜೆ ನಂತರ ದಾಸೋಹ ಮಾಡಿ ಸಂತೃಪ್ತಿಯಾಗಿ ಹೋಗುತ್ತಿದ್ದಾರೆನ್ನುತ್ತಾರೆ ದೇವಾಲಯದ ಇಒ ಕೃಷ್ಣ.**



# ೮೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಮಂಡ್ಯ-೨೦೨೪







ಗೊ.ರು ಚನ್ನಬಸಪ್ಪ
ಸರ್ವಾಧ್ಯಕ್ಷರು
87 ನೇ ಅಖಿಲ ಭಾರತ
ಕನ್ನಡ ಸಾಹಿತ್ಯ ಸಮ್ಮೇಳನ ಮಂಡ್ಯ

## ಮೈಸೂರು ಸಕ್ಕರೆ ಕಂಪನಿ ನಿಯಮಿತ, ಮಂಡ್ಯ.





ದಿನಾಂಕ: ಡಿಸೆಂಬರ್ 20, 21 ಹಾಗೂ 22

ಸ್ಥಳ: ಸ್ಯಾಂಜೋ ಆಸ್ಪತ್ರೆ ಹಿಂಭಾಗದ ಮೈದಾನ, ಸಕ್ಕರೆ ನಾಡು ಮಂಡ್ಯ




## ಸಕ್ಕರೆ ನಾಡಿನ ಸಮ್ಮೇಳನದ ಸಂಭ್ರಮಕ್ಕೆ

**ಆಗಮಿಸುತ್ತಿರುವ ಎಲ್ಲಾ ಕನ್ನಡಾಭಿಮಾನಿಗಳಿಗೆ ಸ್ವಾಗತ**



ಸಿ.ಡಿ.ಗಂಗಾಧರ
ಅಧ್ಯಕ್ಷರು
ಮೈಸೂರು ಸಕ್ಕರೆ ಕಂಪನಿ ನಿಯಮಿತ,
ಮಂಡ್ಯ.